# ಸಿದ್ಧಗಂಗಾ

## ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

361. ಶ್ರೀ ಆರ್. ಎಸ್. ವೀರಣ್ಣ,
ತಿಪಟೂರು

362. ಶ್ರೀಮತಿ ಹೆಚ್. ಕೆ. ಗೌರಮ್ಮ
W/O ಶ್ರೀ ನಂಜಪ್ಪ, ದಾವಣಗೆರೆ

363. ಶ್ರೀಮತಿ ಗೌರಮ್ಮ,
ಕಾಯಿಪೇಟೆ, ದಾವಣಗೆರೆ

364. ಶ್ರೀ ಎನ್. ಬಿ. ಆಚಾರ್ಯ,
ಸಂಸ್ಕೃತ ಕಾಲೇಜ್, ಶ್ರೀ ಸಿದ್ಧಗಂಗಾಮಠ

365. ಶ್ರೀ ಹೆಚ್. ಡಿ. ತಿಮ್ಮಪ್ಪ, ಎಂ. ಎ., ಬಿ.ಇಡಿ.,
ಸರ್ಕಾರಿ ಬಾಲಕಿಯರ ಪ್ರೌಢಶಾಲೆ
ಅರಸೀಕೆರೆ

366. ಶ್ರೀ ಬಿ. ಹೆಚ್. ಹುದ್ದೂರ್, ಡಿ.ಸಿ ಇ.
ಮುಧೋಳ್, ಬಿಜಾಪುರಜಿಲ್ಲೆ

367. ಶ್ರೀ ಎನ್. ರುದ್ರಪ್ಪ, ಬಿ.ಇ.,
ಜೂನಿಯರ್ ಇಂಜಿನಿಯರ್, ಖಾನಪುರ್
ಬೆಳಗಾಂಜಿಲ್ಲೆ

368. ಶ್ರೀ ಸಿ ಎಂ. ಬಗಟಿ,
ಮುಧೋಳ್, ಬಿಜಾಪುರಜಿಲ್ಲೆ

369 ಜಿ. ಎಸ್. ನವಲಗಿ,
ಮುಧೋಳ್, ಬಿಜಾಪುರಜಿಲ್ಲೆ

370. ಶ್ರೀ ಪಿ. ಆರ್. ಸಾಲಿಮಠ್,
ಕುಂಡರಂಗಿ, ಬೀಳಗಿ ತಾ||
ಬಿಜಾಪುರ ಜಿಲ್ಲೆ.

371. ಎಂ. ಡಿ. ಶಿವಪ್ಪ
ಕುಮಾರಕೃಪ,
ರಾಮಚಂದ್ರ ಅಗ್ರಹಾರ, ಮೈಸೂರು-

372. ಶ್ರೀ ಕೆ. ಎಸ್. ಶಿವಣ್ಣ
ಕದರನ ಹಳ್ಳಿ,
ನೆಲಮಂಗಲ ತಾ|| ಬೆಂಗಳೂರು ಜಿಲ್ಲೆ.

(ಮುಂದುವರೆಯುತ್ತದೆ)



# ಶ್ರೀವಾಣಿ

ಸೀತಾ ಮಾತೆಯನ್ನರಸುತ್ತಾ ಆಂಜನೇಯ ಲಂಕಾ ಪಟ್ಟಣಕ್ಕೆ ಹೋದನು. ಸೂಕ್ಷ್ಮಾಕಾರ ತಾಳಿ ಪುರಪ್ರವೇಶ ಮಾಡಿದನು. ರಾಕ್ಷಸರನ್ನು ಕಂಡನು. ದೈವಭಕ್ತಿ, ಸದಾಚಾರ, ಧ್ಯಾನ, ಭಜನೆ ಅವರಲ್ಲಿ ಎದ್ದು ಕಂಡವು. ಹನುಮಂತನು ಎಲ್ಲಿ ಹಾದಿ ತಪ್ಪಿ ರಾಕ್ಷಸರ ಲೋಕ ಎಂದು ಭಕ್ತರ ಭೂಮಿಗೆ ಬಂದೆನೋ ಎಂದುಕೊಂಡನು. ರಾಕ್ಷಸರೆಲ್ಲಾ ಭಸ್ಮ ಧರಿಸಿ, ರುದ್ರಾಕ್ಷಿ ಹಾಕಿಕೊಂಡು ಭಗವಂತನನ್ನು ಆರಾಧಿಸುತ್ತಿದ್ದರು. "ದಾರಿ ತಪ್ಪಿ ಬಂದಿರುವುದೇ ನಿಜ. ಇದು ರಾಕ್ಷಸರ ರಾಜ್ಯವಲ್ಲ; ಭಕ್ತರ ರಾಜ್ಯ" ಎಂದು ಚಿಂತಿಸತೊಡಗಿದನು. ಹಿಂದಿರುಗಿ ಹೋಗಲು ಸಾಧ್ಯವಿಲ್ಲ. ಸ್ವಾಮಿಯ ಅಜ್ಞೆಯಾಗಿದೆ. ಮನಸ್ಸಿನ ಆಂದೋಲನದಲ್ಲಿ ಅಲ್ಲಿ ಇಲ್ಲಿ ಸುತ್ತಿದ, ಸೀತಾಮಾತೆ ಕಣ್ಣಿಗೆ ಬಿದ್ದಳು. ನೋಡೋಣವೆಂದು ಕಾದು ಕುಳಿತನು. ರಾತ್ರಿ ೧೦ ಗಂಟೆಯ ನಂತರ ರಾಕ್ಷಸರ ನಿಜವಾದ ಜೀವನ ಆರಂಭವಾಯಿತು. ಭಕ್ತಿ ಭೂತವಾಯಿತು, ಕುಡಿತ, ಕುಣಿತ, ಜೂಜಾಟ ಆರಂಭವಾದವು. ಆಂಜನೇಯನಿಗೆ ಆಗ ಅರಿವಾಯಿತು. ರಾಕ್ಷಸರ ಬಹಿರಾಡಂಬರಕ್ಕೆ ತಾನು ಮೋಸ ಹೋಗಿದ್ದುದು ಸ್ಪಷ್ಟವಾಯಿತು.

ವ್ಯಕ್ತಿಗಳ ಬದುಕಿಗೆ ಅಂತರಂಗವೇ ಒರೆಗಲ್ಲು. ಬಹಿರಂಗ ಜೀವನದಿಂದ ಅಂತರಂಗವನ್ನು ಅಳೆಯಲಾಗದು. ದುರಾಚಾರದಿಂದ ಮಾನವ ದಾನವನಾಗುತ್ತಾನೆ; ಸದಾಚಾರದಿಂದ ದಾನವ ದೇವನಾಗುತ್ತಾನೆ. ಹೊರನೋಟಕ್ಕೆ ದೇವರಂತೆ, ಪೂಜ್ಯರಂತೆ ಕಾಣುವ ಅದೆಷ್ಟೋ ಮಂದಿಯ ಅಂತರಂಗ ದಾನವವತ್ವದವರಾಗಿರಲೂ ಸಾಧ್ಯವೆಂಬುದು ಒಂದು ಸೋಜಿಗವೇ ಸರಿ.

# 'ಸಿದ್ಧಗಂಗಾ'

ಸೆಪ್ಟೆಂಬರ್, ೧೯೭೭

ಸಂಪುಟ–೧೩ ಸಂಚಿಕೆ– ೯


## ಈ ಸಂಚಿಕೆಯಲ್ಲಿ



### ಮುಖಪುಟ

ಅಪೂರ್ವ ಶಿಲ್ಪಿ ಕಲೆಗಳ ವಿನ್ಯಾಸದಿಂದ ಕಂಗೊಳಿಸುತ್ತಾ, ಶ್ರೀ ಕ್ಷೇತ್ರದಲ್ಲಿ ಪ್ರತಿಷ್ಠಾಪನೆಗೊಂಡು, ಭಕ್ತರ ಸಿದ್ಧಿ, ಬುದ್ಧಿ ಪ್ರದಾಯಕನಾದ ದ್ವಿಬಾಹು ಗಣಪತಿ


ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು

ಪಂ|| ಚನ್ನಪ್ಪ ಎರೇಸೀಮೆ

ಕೆ. ಜಿ. ರಂಗಯ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ


### ಚಂದಾ ವಿವರ

ವಾರ್ಷಿಕ ಚಂದಾ: 10 ರೂ

ಆಜೀವ ಸದಸ್ಯತ್ವ: 101 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗ್ಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

'ಸಿದ್ಧಗಂಗಾ' [ಕನ್ನಡ ಮಾಸ ಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ –572131 ತುಮಕೂರು ಜಿಲ್ಲೆ

ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ನಿಮ್ಮ ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ವಿಳಾಸದ ಹಿಂಬದಿ ಇರುವ ಕ್ರಮಾಂಕ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪತ್ರ ಬರೆಯಿರಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ನೂತನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ವಿನಂತಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾಮಠ–572131, ತುಮಕೂರು ಜಿಲ್ಲೆ

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ಪಾದಪಾನಾಂ ಭಯಂ ವಾತಃ ಪದ್ಮಾನಾಂ ಶಿಶಿರೋ ಭಯಮ್ ।**
**ಪರ್ವತಾನಾಂ ಭಯಂ ವಜ್ರಃ ಸಾಧೂನಾಂ ದುರ್ಜನೋ ಭಯಮ್ ॥**

ಮರಗಳಿಗೆ ಬಿರುಗಾಳಿ, ಕಮಲಕ್ಕೆ ಶಿಶಿರ ಋತು
ಅರಿಗಳೆನಿಸುವರವಕೆ ಭಯವ ತಂದು
ಪರ್ವತಗಳದುರುವುವು ಗುಡುಗು-ಸಿಡಲಿಗೆ ನಡುಗಿ
ಸಜ್ಜನರೊ ದುರ್ಜನರ ಭೀತಿಗಾಗಿ

**ಮಕ್ಷಿಕಾ ವ್ರಣಮಿಚ್ಛಂತಿ ಧನಮಿಚ್ಛಂತಿ ಪಾರ್ಥಿವಾಃ ।**
**ನೀಚಾಃ ಕಲಹಮಿಚ್ಛಂತಿ ಶಾಂತಿಮಿಚ್ಛಂತಿ ಸಾಧವಃ ॥**

ವ್ರಣದಾಸೆ ನೊಣಗಳಿಗೆ ರಕ್ತದಾಹ
ದಣಿಗಾದರೋ ಹಣದ ಮೇಲೆ ಮೋಹ
ದುಷ್ಟನಿಷ್ಟವು ನಿತ್ಯ ಕಲಹ-ಕ್ರಾಂತಿ
ಶಿಷ್ಟ ಬಯಸುವ ತಾನು ಸಂಧಿ-ಶಾಂತಿ

**ಖಲಾನಾಂ ಕಂಟಕಾನಾಂ ಚ ದ್ವಿವಿಧೈವ ಪ್ರತಿಕ್ರಿಯಾ ।**
**ಉಪಾನನ್ಮುಖಭಂಗೋ ವಾ ದೂರತೋ ವಾ ವಿಸರ್ಜನಮ್ ॥**

ಮುಳ್ಳಿಗೂ ಮೂರ್ಖನಿಗು ಬುದ್ಧಿ ಕಲಿಸೆ
ಪ್ರತಿಕ್ರಿಯೆಗಳೆರಡುಂಟು ಲೋಕದೊಳಗೆ
ಮುಖಮುರಿವುದಲ್ಲದಿರೆ ದೂರ ಸರಿದು
ಮೊಗದಿರುವಿ ಸಾಗುವುದು ದಾರಿಯೊಳಗೆ

—"ಕಾವ್ಯಸುಧಾಪ್ರಿಯ"

## ಅಮೃತ ಬಿಂದು.

• • •

'ನಂಬಿಕೆಯೇ ದೇವರು' ಎಂಬ ವಿಚಾರಪರ ವಾಣಿಯೊಂದಿದೆ. ಮಾನವ ತನ್ನ ಜೀವನ ಪರ್ಯಂತ ಅನುಭವಿಗಳ ಸ್ವಾನುಭವಸಿದ್ಧ ಉಪದೇಶಗಳನ್ನು ನಂಬಿ ಅದರಂತೆ ಆಚರಿಸಿದರೆ ಅವನ ಬಾಳು ಬಂಗಾರವಾಗುತ್ತದೆ. ಎಲ್ಲದಕ್ಕೂ ಭೌತಿಕ ಅಸ್ತಿತ್ವದ ಪ್ರಮಾಣವಿರಲೇಬೇಕೆಂಬ ವಾದವನ್ನು ಮುಂದು ಮಾಡಿ, ಯಾವುದನ್ನೂ ನಂಬದೆ ಸಂಶಯಾಸಕ್ತನಾದವನು ಜೀವನವಿಡೀ ತೊಂದರೆಗೀಡಾಗುತ್ತಾನೆ, 'ನಂಬಿದರೆ ನಾಕ ಇಲ್ಲದೊಡೆ ನರಕ' ವೆಂಬುದು ಅನೇಕ ಸಂದರ್ಭಗಳಲ್ಲಿ ನಂಬದೆ ನೊಂದವರ ಜೀವನದ ಸಾರಸಂಗ್ರಹವೆನಿಸಿದೆ. ಇಂದು ಎಲ್ಲಕ್ಕಿಂತ ಹೆಚ್ಚಾಗಿ ದೇವರಲ್ಲಿ ನಂಬಿಕೆ ಸಡಿಲವಾಗುತ್ತಿದೆ. ಎಲ್ಲೆಲ್ಲೂ ನಾಸ್ತಿಕವಾದದ ಕತ್ತಲೆ ಕವಿಯುತ್ತಿದೆ. ಈ ಅಂಧಕಾರವಳಿದು ನಂಬಿಕೆಯ ಹೊಂಬೆಳಕು ಮೂಡಬೇಕಾದರ ಧರ್ಮಶ್ರದ್ಧೆ, ಒಳಿತು-ಕೆಡುಕು ಪರಿಣಾಮಗಳ ಭೇದದ ಅರಿವು ಉಂಟಾಗಬೇಕಾಗಿದೆ. ನಂಬದೆ ಕರೆಯುವವರ ಸಂಖ್ಯೆ ಅಧಿಕವಾಗಿರುವ ಇಂದು ಕರೆಗೆ ಓಗೊಟ್ಟು ಬಂದು ಸಂಕಷ್ಟ ಪರಿಹರಿಸುವಲ್ಲಿ ದೇವದೇವನೂ ಹಿಂದುಳಿದಿದ್ದಾನೆಂದರೆ ತಪ್ಪಾಗದು. 'ನಂಬಿ ಕರೆದೊಡೆ ಓ ಎನ್ನನೆ ಶಿವನು ? ಅಂದೇ ಅನ್ನುತ್ತಾನೆಂದರೆ ಅದು ಮಿಥ್ಯೆಯೇನಲ್ಲ. ಅಚಲವಾದ ನಂಬಿಕೆಯನ್ನಿಟ್ಟಿರುವವನಿಗೆ ದೈವಬಲದ ಸಹಾಯವಿರುವುದನ್ನು ಈಗಲೂ ಕಾಣಬಹುದಾಗಿದೆ 'ಆಸ್ತಿಕರಿಗೆ ಇದ್ದಾನೆ; 'ನಾಸ್ತಿಕರಿಗೆ ಇಲ್ಲ" ಎನ್ನುವುದಾದರೆ ದೇವರ ಇರುವಿಕೆ ಇಲ್ಲದಿರುವಿಕೆ ನಮ್ಮ ನಂಬಿಕೆಯನ್ನವಲಂಬಿಸಿದೆ ಎಂದಷ್ಟೇ ಅರ್ಥೈಸಬೇಕಾಗುತ್ತದೆ.

—"ದುಂಬಿ"

# "ಶ್ರೀ ಶರಣ"

## ಅದ್ವಿತೀಯ ಅನುಭವ ಮಂಟಪ

—ಸಿದ್ದಯ್ಯ ಪುರಾಣಿಕ್.

> ವಿಚಾರ ಸ್ವಾತಂತ್ರ್ಯದ ವಿಜಯಧ್ವಜ, ಸಾಂಸ್ಕೃತಿಕ ಕ್ರಾಂತಿಯೊಂದರ ಸಂಕೇತ, ಶ್ರೀ ಸಾಮಾನ್ಯರ ಶುಭೋದಯದ ಶ್ರೀಕಾರ, ಸರ್ವಸಮಾನತೆಯ ಝೇಂಕಾರ ವೆನಿಸಿದ ಅನುಭವ ಮಂಟಪ ವಿಚಾರ ವಿನಿಮಯ ಚಿಂತನ - ಮಂಥನಗಳ ವೇದಿಕೆಯಾಗಿದ್ದಿತೆನ್ನುವುದು ನಿರ್ವಿವಾದ ಸಂಗತಿ.

**ಐತಿಹಾಸಿಕತೆ :—**

1-1-1944 ರ "ಜಯಂತಿ" ಸಂಚಿಕೆಯಲ್ಲಿ ಅನುಭವ ಮಂಟಪದ ಐತಿಹಾಸಿಕತೆಯನ್ನು ಶಂಕಿಸಿದ ಶ್ರೀ ಕಪಟರಾಳ ಕೃಷ್ಣರಾಯರೂ, ಇದಕ್ಕೆ "ಜಯ ಕರ್ನಾಟಕ"ದ ಅದೇ ವರ್ಷದ ಮಾರ್ಚ್, ಏಪ್ರಿಲ್, ಮೇ, ಜೂನ್ ತಿಂಗಳುಗಳ ಸಂಚಿಕೆಗಳಲ್ಲಿ ಉತ್ತರ ಕೊಡುವುದಲ್ಲದೇ "ಅನುಭವ ಮಂಟಪದ ಐತಿಹಾಸಿಕತೆ" ಎಂಬ ಗ್ರಂಥವನ್ನೇ 1951 ರಲ್ಲಿ ಬರೆದ ಹಿರಿಯರಾದ ಚನ್ನಪ್ಪ ಉತ್ತಂಗಿಯವರು ಇಂದು ನಮ್ಮ ಮಧ್ಯದಲ್ಲಿಲ್ಲ. ಅನುಭವ ಮಂಟಪದ ಐತಿಹಾಸಿಕತೆಯನ್ನು ಮತ್ತೆ ಪ್ರಬಲವಾಗಿ ಪ್ರಶ್ನಿಸಿದರೂ ಇಲ್ಲವೆಂದೇ ತೋರುತ್ತಿದೆ. ಆದರೂ ಈ ಬಗ್ಗೆ ಇದುವರೆಗೆ ನಡೆದ ವಾದ ಪ್ರತಿ-ವಾದಗಳ ಸಿಂಹಾವಲೋಕನವೊಂದು ಉಪಯುಕ್ತ.

"ಅನುಭವ ಮಂಟಪ" ವೆಂಬ ಸಂಸ್ಥೆಯು 15 ನೆಯ ಶತಮಾನದ ಕಲ್ಪನೆಯಾಗಿರದಿದ್ದರೆ ಈ ಹೆಸರು ಯಾವ ಕಾಲದಲ್ಲಿ ಪ್ರಾರಂಭವಾಯಿತೆಂಬ ಪ್ರಶ್ನೆಯುಂಟಾಗುತ್ತದೆ. ಇದು ಸಿಂಗರಾಜ ಪುರಾಣದಲ್ಲಿದೆಯೆಂದು ಕೃಷ್ಣರಾಯರು ಒಪ್ಪಿದ್ದಾರೆ. ಚನ್ನಬಸವ ಪುರಾಣದ

ಲ್ಲಿಯೂ ಈ ಹೆಸರು ಬರುತ್ತದೆ. (ಕಾಂಡ 1,
4, ಪದ್ಯ 8) ಶಿವಾನುಭವ ಮಂಟಪಕ್ಕೆ ಅನು
ಮಂಟಪವೆಂಬ ಹೆಸರು ಬಂದುದು ಬಹುಶ: ಅಲ್ಲಮನಿ
"ಮಂಟಪ" "ಸಿಂಹಾಸನ" ವೆಂಬ ಪದಗಳು ಬಂ
ಸಿದ್ಧಾಂತಕ್ಕೆ ಮೂಲ ಪುರುಷನಾದ ಅಲ್ಲಮನ ವಚ
ಳಲ್ಲಿ ಪ್ರಯೋಗವಾಗಿರುವಷ್ಟು ಧಾರಾಳವಾಗಿ
ಯಾರ ವಚನಗಳಲ್ಲಿಯೂ ಪ್ರಯೋಗವಾಗಿರುವುದಿಲ್ಲ
ಹೀಗಾಗಿ ವಚನ ವಾಙ್ಮಯದಲ್ಲಿ ಅನೇಕ ಕಡೆಗ
ದೊರೆಯುವ "ಅಚಲ ಮಂಟಪ" "ವಿಶಾಲ ಮಂ
"ಜ್ಞಾನ ಮಂಟಪ" "ಪ್ರಕಾಶ ಮಂಟಪ" "ಕಪ್ರ
ಸಿಂಹಾಸನ" ಮುಂತಾದ ಹೆಸರುಗಳು ಕಲ್ಯಾಣದ
ಶಿವಾನುಭವ ಮಂಟಪದ ಸ್ಮಾರಕಗಳೆಂದೇ ತಿಳಿದು
ಳ್ಳತಕ್ಕದು........"ಮಹಮನೆ" ಗೂ ಅನುಭವ ಮ
ಪಕ್ಕೂ ಯಾವ ತರಹದ ವ್ಯತ್ಯಾಸವಿರುವುದಿಲ್ಲವೆ
15 ನೆಯ ಶತಮಾನದ ವೀರಶೈವ ಸಾಹಿತ್ಯದಿಂದ ಸ
ವಾಗಿ ತಿಳಿದು ಬಂದುದರಿಂದಲೇ 14ನೆಯ ಶತಮ
ದವರು—ಅಂದರೆ, ಸಿಂಗರಾಜ, ವಿರೂಪಾಕ್ಷಪಂ
ಮೊದಲಾದ ಕವಿಗಳು ತಮ್ಮ ಗ್ರಂಥಗಳಲ್ಲೆ, 'ಅನು
ಮಂಟಪ" ವೆಂಬ ಹೆಸರನ್ನು ನಿರಾಂತಕವಾಗಿ ಪ್ರಂ
ಗಿಸಿ ಕೊಂಡಿದ್ದಾರೆ........"

ಚನ್ನಪ್ಪ ಉತ್ತಂಗಿ ಅವರ 'ಅನು
ಮಂಟಪದ ಐತಿಹಾಸಿಕತೆ; (ಪುಟಗಳು 103, 1
ಬಸವ ಪುರಾಣದಲ್ಲೆ ಬರುವ 'ಭವನ ಮಂಟಪ (ಸಂಧಿ
ಪದ್ಯ 24), ಹರಿಹರನಲ್ಲಿ ಬರುವ ಪುರಾತನರ ಗ
ಗೋಷ್ಠಿ (ಸ್ಥಲ 6, ಪದ್ಯ 40-50) ವಚನಗ
ಅನೇಕ ಕಡೆಗಳಲ್ಲಿ ಉಕ್ತವಾಗಿರುವ 'ಅನುಭವಗೋ
ಕಾಲಜ್ಞಾನ ವಚನಗಳಲ್ಲಿ ಕಾಣುವ ವಿಚಾರ ಮಂ
ಪುಟ 2) ಆಚಾರ ಸಂಪನ್ನರ ಅನು
ಮಂಟಪ (ಪುಟ 37) ಪ್ರಕಾರ ಮಂಟಪ (ಪುಟ
ಎಲ್ಲ ದೇವ ಅನುಭವ ಮಂಟಪ (ಪುಟ 8) ಇತ್ಯಾ
ಉಲ್ಲೇಖಗಳಿಂದಲೂ ಅನುಭವ ಮಂಟಪದ ಐತಿಹಾಸಿ
ಸಿದ್ಧವಾಗುವುದಾದರೂ ಸಮಕಾಲೀನ ವಚನ ಸಾ
ದಲ್ಲಿಯೇ ಇದಕ್ಕೆ ಸ್ಪಷ್ಟ ಉಲ್ಲೇಖ ಸಿಕ್ಕದಿದ್ದುದೊ
ಕೊರತೆಯೆನಿಸಿದ್ದಿತು. ಈಗ ಆ ಕೊರತೆಯೂ ತ
ಬಂದಿದೆ. ಇನ್ನಾರು ಅಲ್ಲ, ಬಸವಣ್ಣನವರ ಧರ್ಮ

ನಿಜಭಕ್ತಿಯು ನೀಲಮ್ಮನವರ ಒಂದು ವಚನವೇ ನಿಸ್ಸಂದಿಗ್ಧವಾಗಿ ಅನುಭವ ಮಂಟಪದ ಅಸ್ತಿತ್ವವನ್ನು ಐತಿಹಾಸಿಕತೆಯನ್ನು ಉದ್ಘೋಷಿಸುತ್ತಿದೆ.

ಇಪ್ಪತ್ತೈದು ಸಾವಿರ ಜಾರ್ವಾಕರಂ ನೆಗ್ಗಲೊತ್ತಿ,
ಅಪ್ರತಿಮ ಶಿವಗಣಂಗಳ ಮಹಾತ್ಮೆಯಂ ಮೆರೆದಾತ
ನಮ್ಮ ಬಸವಯ್ಯನು
ಪ್ರಣವದ ಬೀಜವ ಬಿತ್ತಿ,ಪಂಚಾಕ್ಷರಿಯ ಬೆಳೆಯ ಬೆಳೆದು
ಪರಮ ಪ್ರಸಾದವನೊಂದು ರೂಪ ಮಾಡಿ ಮೆರೆದು,
ಭಕ್ತಿ ಫಲವನುಂಡಾತ ನಮ್ಮ ಬಸವಯ್ಯನು
ಜನ್ನಬಳವನೆಂಬ ಪ್ರಸಾದಿಯ ಪಡೆದು,
ಅನುಭವ ಮಂಟಪವನನು ಮಾಡಿ
ಅನುಭವ ಮೂರ್ತಿಯಾದ ನಮ್ಮ ಬಸವಯ್ಯನು
ಅರಿವ ಸಂಪಾದಿಸಿ, ಆಚಾರವನಂಗಗೊಳಿಸಿ
ಏಳುನೂರೈವತ್ತು ಅಮರಗಣಂಗಳ
ಅನುಭವ ಮೂರ್ತಿಗಳ ಮಾಡಿದಾತ
ನಮ್ಮ ಬಸವಯ್ಯನು......... .....

(ಶಿವಶರಣೆಯರ ವಚನಗಳು : ಕರ್ನಾಟಕ ವಿಶ್ವವಿದ್ಯಾಲಯ ಪ್ರಕಾಶನ : ಪುಟ 193)

**ಪ್ರೇರಣೆ :—**

ಅನುಭವ ಮಂಟಪದ ಐತಿಹಾಸಿಕತೆಯ ಇತ್ಯರ್ಥವಾದ ಮೇಲೆ ಅದಕ್ಕೆ ಪ್ರೇರಣೆ ಎಲ್ಲಿಂದ ಬಂದಿರಬಹುದೆಂಬುದರ ಬಗ್ಗೆ ಅದರಂತಹ ಬೇರೆ ಸಂಸ್ಥೆಗಳಿದ್ದವೇ ಎಂಬ ಬಗ್ಗೆ ಜಿಜ್ಞಾಸೆ ಸಹಜ. ವಚನಗಳ ಉಗಮವನ್ನು ಅರಸುವವರು ವಚನಗಳು ಸಮ್ಮತವಾದ ಅನುಭವ ಮಂಟಪದ ಉಗಮವನ್ನು ಅರಸುವುದು ಸ್ವಾಭಾವಿಕ. ಆದರೆ ಒಂದು ಮಾತು : ಈ ಮೂಲಗಳ ಶೋಧನೆ ಹಿಂದೆಳೆಯುತ್ತ ಹೋದಂತೆ ಮೊದಲಿಲ್ಲದಾಗುವುದು. ಉದಾಹರಣೆಗೆ-ವಚನಗಳ ಉಗಮ ತೇವಾರಗಳಲ್ಲಿ ಎಂದು ಇಟ್ಟುಕೊಳ್ಳೋಣ-ವಾದಕ್ಕಾಗಿ; ತೇವಾರ ಉಗಮವೆಲ್ಲಿ ? ಅವುಗಳ ಉಗಮ ದೊರೆತರೂ ಅವುಗಳ ಉಗಮದ ಉಗಮವೆಲ್ಲಿ ? ಹೀಗೆ ಹಿಂದು ಹಿಂದಕ್ಕೆ ಹೋದಾಗ ಮಾನವನೇ ಮೊದಲ ಮೂಲವೆಂಬುದು ನಿರ್ವಿವಾದವಾಗುತ್ತದೆ. ಇಷ್ಟು ಹಿಂದಿನ ಕಾಲದ ಮಾನವ ಎಲ್ಲದಕ್ಕೂ ಮೂಲನಾಗಬಹುದಾದರೆ ಹನ್ನೆರಡನೆಯ ಶತಮಾನದ ಮಾನವ ಅನುಭವ ಮಂಟಪದ ಕಲ್ಪನೆಗೆ ಮೂಲನಾಗಲಾರನೆ ?

ಆದರೂ ಈ ಸಂಸ್ಥೆಯನ್ನು ಅರಿಸ್ಟಾಟಲನ ಲಿಸಿಯಮ್ಮಿಗೋ, ತಮಿಳರ ಸಂಗಮಕ್ಕೋ, ಉಪನಿಷದಾರಾಮಗಳಿಗೋ, ಅಶೋಕನ ಧರ್ಮ ಸಭೆಗಳಿಗೋ ಹೋಲಿಸುವ ಹವ್ಯಾಸವಿದ್ದೇ ಇದೆ. ಇರಲಿ, ಆದರೆ ಒಂದು ಮುಖ್ಯ ಭೇದ ನೆನಪಿರಲಿ.

“ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿ ಸಂಘಶಕ್ತಿಯಿಂದ ಆದ ಅನೇಕ ಮಹತ್ವದ ಕೆಲಸಗಳ ಉಲ್ಲೇಖಗಳು ದೊರೆಯುತ್ತವೆ. ಪ್ಲೇಟೋ ಸಂಗ್ರಹಿಸಿರುವ ಸೊಕ್ರೇಟಿಸನ ಸಂಭಾಷಣೆಗಳು, ತಮಿಳು ನಾಡಿನ ಸಂಘಸಾಹಿತ್ಯ, ಮಧ್ಯ ಕಾಲದ ಪರ್ಶಿಯಾ ದೇಶದ ಸೂಫಿ ಸಾಹಿತ್ಯಗಳನ್ನು ಅನುಭವ ಮಂಟಪದ ಸಾಹಿತ್ಯ ಸೃಷ್ಟಿಗೆ ಹೋಲಿಸಬಹುದು. ಆದರೆ ಒಬ್ಬ ವ್ಯಕ್ತಿಯನ್ನೇ ಅವಲಂಬಿಸದೆ ತತ್ತ್ವಗಳ ಬುನಾದಿಯ ಮೇಲೆ ನಿಂತು ಸಮಾಜ ಧರ್ಮ, ವ್ಯಕ್ತಿ ಪ್ರಗತಿಗಳೆಲ್ಲವನ್ನೂ ಸಮಾನ ದೃಷ್ಟಿಯಿಂದ ಅನುಲಕ್ಷಿಸಿ, ಜನಜೀವನದ ಎಲ್ಲ ಅಂಗಗಳ ಮೇಲೂ ತನ್ನ ಪ್ರಭಾವ-ಮುದ್ರೆಯನ್ನೊತ್ತಿದ ಕೀರ್ತಿ ಅನುಭವ ಮಂಟಪಕ್ಕೆ ಸೇರುತ್ತದೆ. ಅನುಭವ ಮಂಟಪದ ಶರಣರ ಜಿಜ್ಞಾಸು ಲಕ್ಷಣ, ವಿಚಾರ ಧೋರಣೆ ಹಾಗೂ ಸತ್ಯದ ಸ್ಪಷ್ಟ ಅನುಕರಣೆ — ಇವು ಅವರ ಬೋಧೆಗೆ ಹಿರಿಯ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ.

(ಅ.ನ. ಕೃಷ್ಣರಾಯರು: “ಅನುಭವಮಂಟಪ” ವೀರಶೈವ ತತ್ತ್ವ ಪ್ರಕಾಶ. ಪುಟಗಳು (244–47)

**ಅದ್ವಿತೀಯತೆ :—**

ಇನ್ನೂ ವಿಶದವಾಗಿ ವಿವರಿಸುವುದಾದರೆ ಅನುಭವ ಮಂಟಪದ ಅದ್ವಿತೀಯತೆಗೆ ಕಾರಣವಾಗಿರುವವು.

1.

“ಅನುಭಾವ ವಿಲ್ಲದ ಭಕ್ತಿ ಅನುವಿಂಗೆ ಬಾರದು:
ಅನುಭಾವ ವಿಲ್ಲದ ಲಿಂಗಸಮರಸ ಸುಖವನೀಯದು:
ಅನುಭಾವ ವಿಲ್ಲದ ಪ್ರಸಾದ ಪರಿಣಾಮ ಕೊಡದು :
ಅನುಭಾವ ವಿಲ್ಲದೆ ಏನೇನೂ ಅರಿಯಬಾರದು.

ತನ್ನಲ್ಲಿ ಸನ್ನಿಹಿತ ಉಳ್ಳೊಡೆ ಶಿವಶರಣನ ಸಂಗವೇತಕ್ಕೆನಲುಂಟೆ? ಕೂಡಲ ಸಂಗಮದೇವಯ್ಯ, ನಿಮ್ಮ ಅನುಭಾವ ಮಾತಿನ ಮಥನವೆಂದು ನುಡಿಯ ಬಹುದೇ ಪ್ರಭುವೆ”

"ಅನುಭಾವವಿಲ್ಲದೆ ಏನನೂ ಅರಿಯಬಾರದು; ಅನುಭಾವಕ್ಕೆ ವ್ಯಕ್ತಿಯ ಅನುಭವವೇ ಆಧಾರ. ಆದರೂ ಶಿವಶರಣರ ಸಂಗದಲ್ಲಿಯೇ, ಅವರ ಅನುಭವ ಗೋಷ್ಠಿಯಲ್ಲಿಯೇ ಅದಕ್ಕೆ ಸಾರ್ಥಕತೆ. ಇದು ವ್ಯಷ್ಟಿಯ ಪ್ರಾಥಮಿಕತೆಯನ್ನು ಒಪ್ಪಿಯೂ ಸಮಷ್ಟಿಯ ಪ್ರಾಧಾನ್ಯವನ್ನು ಒತ್ತಿ ಹೇಳುವ ವಿಧಾನ. ಆದುದರಿಂದ ಅನುಭಾವ ಗುರಿಗೆ ಅನುಭವ ಗೋಷ್ಠಿಯೇ ದಾರಿ.

"ಮರ ಮರ ಮಥನಿಸಿ ಕಿಚ್ಚು ಹುಟ್ಟಿ
ಸುತ್ತಣ ತರುಮರಾದಿಗಳ ಸುಡಲಾಯಿತ್ತು;
ಆತ್ಮ ವಾತ್ಮ ಮಥನಿಸಿ ಅನುಭಾವ ಹಠಟ್ಟಿ
ತನುಗುಣಾದಿಗಳ ಸುಡಲಾಯಿತ್ತು;
ಇದು ಕಾರಣ, ನಿಮ್ಮ ಮಹಾನುಭಾವಿಗಳ ಅನುಭಾವವ ತೋರಿ
ಎನ್ನೊಡಲನಾಳುಹಿ ಕೊಳ್ಳಾ, ಚೆನ್ನ ಮಲ್ಲಿಕಾರ್ಜುನಾ:"

ಈ "ಆತ್ಮವಾತ್ಮಗಳ ಮಥನ" ಕೇವಲ ಮತಿಗಳ ಮಥನವಲ್ಲ, ಚಿಂತನೆಗಳ ಮಂಥನವಲ್ಲ, ಅಕ್ಕಮಹಾದೇವಿಯ ಮಾತಿನಲ್ಲಿ "ನಿಮ್ಮನುಭಾವಿಗಳೆನ್ನ ನೊರೆದೊರೆದು ಆಗು ಮಾಡಿದ ಕಾರಣ ಚೆನ್ನಮಲ್ಲಿಕಾರ್ಜುನ ನಿ ಮ ಗಾ ಸು ತೊಡಿಗೆ ಮಾಡನು, ಎ ನ್ನು ವ ಒರೆದೊರೆದು ಆಗು ಮಾಡುವ" ನೋಡಿ ಇಷ್ಟೇ ಅಲ್ಲ, ಇದು ಆತ್ಮಮಥನದೊಡನೆ ಕ್ರಿಯಾಮಥನವೂ ಹೌದು :

ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ಇಕ್ಷುವಿನೊಳಗಣ ಮಧುರ ?
ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ತಿಲದೊಳಗಣ ತೈಲ
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಟದೊಳಗಣ ಅಗ್ನಿ

ಇದು ಕಾರಣ, ನಮ್ಮ ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣಿಭೋ"

ಇಂತಿದು ಕ್ರಿಯಾಜ್ಞಾನ ಸಾಮರಸ್ಯದ, ಅನುಭಾವ-ಕಾಯಕಗಳ ಅವಿನಾಭಾವತೆಯ, ವಿಚಾರ ಆಚಾರಗಳ ಸಕ್ರಿಯ ಸಮನ್ವಯದ ಪ್ರಯೋಗ ಶಾಲೆ-ಈ ಅನುಭವ ಮಂಟಪ. ಈ ದ್ವಿಮುಖ ಸಾಧನೆಗೆ ಸಹಾಯಕವಾಗಲೆಂದೇ ಅನುಭವ ಮಂಟಪದ ಚರ್ಚೆಗಳು ನಡೆಯುತ್ತಿದ್ದುದು. ಪ್ರಭುದೇವರ ಸೃಷ್ಟಿಯ ವಚನದ ಟೀಕಾಕಾರ ಕಥಿಸುವಂತೆ ಬೆಳಗಿನ ಜಾವದಲ್ಲಿ;

"ವಚನ ಭಾಂಡಾರದ ಶಾಂತಯ್ಯಗಳು ವಚನಾಮೃತದ ಲೇಖನಾಗೈದು ಬಸವರಾಜದೇವರಿಗೆ ಕೊಡಲು, ಅವರು ಅದನ್ನು ಓದಿಕೊಂಡು ಷಟ್‌ಸ್ಥಲಜ್ಞಾನ ಸಾರೋದ್ಧಾರ, ಲಿಂಗೋದ್ಧರಣ, ವಿಮಲ ವಿಚಕ್ಷಣರಾದ ಚನ್ನಬಸವೇಶ್ವರ ದೇವರು, ಷಟ್‌ಸ್ಥಲ ಬ್ರಹ್ಮಿಗಳನೊಡಗೊಂಡಿರುವಂಥ 'ಅನುಭವ ಮಂಟಪ' ಕ್ಕೆ ಬಸವರಾಜ ದೇವರು ಸುಪ್ರಭಾತಸಮಯದೊಳು ಈಶ್ವರಾರ್ಚನೆಯಂ ಗೈದು ಅಸಂಖ್ಯಾತರೊಡಗೊಂಡು ಬಂದು, ಚನ್ನಬಸವೇಶ್ವರ ದೇವರಿಗೆ ಅಷ್ಟಾಂಗ ಪ್ರಣೀತರಾಗಿ, ಮೂರ್ತವ ಮಾಡಿ ಕೊಂಡಿರಲು ಬಸವರಾಜ ದೇವರು ಅದನೋದಿಕೊಂಡು ಚನ್ನಬಸವರಾಜ ದೇವರಿಗೆ ಕೊಡಲು, ಅವರು ತ್ರಿವಿಧ ಲಿಂಗಾನುಭಾವವಂ ಮಾಡಲ್ತುದಿಲ್ಲ ಅಸಂಖ್ಯಾತ ಪ.ಹಾ ಗಣಂಗಳು ಒಂದು ಜಾವ ಹೊತ್ತು ಕೇಳಿ ತಮ್ಮ ದಿವ್ಯಾ ಧ್ಯಾವಸಾನವನರಿದುಕೊಂಡ ಬಳಿಕ ತಮ್ಮ ತಮ್ಮ ಗೃಹಕ್ಕೆ ಹೋಗಿ ಕಾಯಕ ವೃತ್ತಿಯಂ ಕೈಕೊಂಡು ಗುರುಭಕ್ತಿ, ಲಿಂಗಪೂಜೆ, ಜಂಗಮ ದಾಸೋಹದೊಳ್ ಪರಿಣತರಾಗಿ ರುತ್ತಿದ್ದರು."

(ಅನುಭವ ಮಂಟಪದ ಐತಿಹಾಸಿಕತೆ-ಪುಟಗಳು 57-59)

ಇಂತಿದು ಕಾಯಕೋದ್ದೀಪನಕ್ಕೆ ಮಹಾನುಭಾವ ಪ್ರಸಂಗ; ಅಂತರಂಗ ಕೃಷಿರಂಗ; ಅನುಭಾವ ಮಂಟಪದ ಕ್ರಿಯಾರಂಗ; ಎನ್ನ ಭಾವವು ಎಲ್ಲಿ ನಿಂದಿಹುದು, ಅಲ್ಲಿ ನಿಮ್ಮ ನಿಲವೆ ತುಂಬಿರ್ಪುದಯ್ಯಾ, ಅಖಂಡೇಶ್ವರ' ಎಂಬ ಅಂತರನುಭವದ ಸಿದ್ಧಿಯ ತುಂಗಮಂಗಲ ಶೃಂಗ.

### ಆಧ್ಯಾತ್ಮವೀರರ ಮಂಟಪ :–

2. ಎರಡನೆಯದಾಗಿ, ಒಬ್ಬ ಪ್ರವಾದಿ ಎಂದೋ ಹೇಳಿದ ಮಾತುಗಳನ್ನು ಯುಗಯುಗಳವರೆಗೆ ಅವನ ಅನುಯಾಯಿಗಳು ಚಾಚೂ ತಪ್ಪದೇ, ಒಂದಕ್ಷರವನ್ನೂ ತಿದ್ದದೆ ಅನುಸರಿಸಿ ಕೊಂಡು ಹೋಗಬೇಕೆಂಬ ಅಧಿಕಾರೀ ಮನೋವೃತ್ತಿಯವರದಲ್ಲ ಅನುಭವಮಂಟಪ. ಅನುಭವದ ಒರೆಗಲ್ಲಿಗೆ ಉಜ್ಜಿದಾಗ ಉದುರಿ ಹೋಗುವುದೇನಾದರೂ ಇದ್ದರೆ ಹೋಗಿ ಅಪರಂಜಿ ಮಾತ್ರ ಉಳಿಯಲಿ –ಎನ್ನುವ ಪ್ರಗತಿಪರ ಪುರೋಗಾಮೀ ದೃಷ್ಟಿಯವರ ಮಂಟಪವದು.

3. ಮೂರನೆಯದಾಗಿ, ಯಾವುದೇ ಒಂದು ಅಪೌರುಷೇಯತೆಯನ್ನಾಗಲಿ ಅನುಲ್ಲಂಘನೀಯತೆಯನ್ನಾಗಲಿ, ಅಂತಿಮತೆಯನ್ನಾಗಲೀ ಮನ್ನಿಸುವವರ ಮಂಟಪವಲ್ಲ ಅದು.

"ಅನಂತ ವೇದ, ಶಾಸ್ತ್ರ, ಆಗಮ, ಪುರಾಣ, ತರ್ಕ, ತಂತ್ರಗಳನ್ನು
ಆತ್ಮಮಾಡಿದನಲ್ಲದೆ, ಆತ್ಮನನವು ಮಾಡಿದುದಿಲ್ಲ.
ಎನ್ನಂತರಂಗದ ಅರಿವಿನ ಮೂರ್ತಿಯಾಗಿ,
ಎನ್ನ ಉರಿಲಿಂಗ ದೇವರು ಸಂಕಲ್ಪಿಸಿ ಆಗೆಂದರಾದವು"
ಎಂದು ನಂಬುವ ಅಧ್ಯಾತ್ಮ ವೀರರ ಮಂಟಪವದು.

**ಸಮತಾವಾದೀ ಮಂಟಪ :-**

4. ನಾಲ್ಕನೆಯದಾಗಿ, ಸಾಮಾನ್ಯ -ಅಸಾಮಾನ್ಯ. ಹಿರಿಯ-ಕಿರಿಯ, ಸ್ಪೃಶ್ಯ-ಅಸ್ಪೃಶ್ಯ ಸ್ತ್ರೀ-ಪುರುಷ, ಕುಲಜ-ಕುಲಹೀನ, ಬಲ್ಲಿದ-ಬಡವ, ಪಂಡಿತ-ಪಾಮರ, ಶ್ರೇಷ್ಠ ವೃತ್ತಿಯವ-ಕನಿಷ್ಠ ವೃತ್ತಿಯವ, ಕರಿಯ-ಬಿಳಿಯ, ಇತ್ಯಾದಿ ಯಾವ ಕೃತ್ರಿಮ ವಿಭೇದಕ್ಕೂ ಆಸ್ಪದವೀಯದೆ ಎಲ್ಲರಿಗೂ ಮುಕ್ತ-ದ್ವಾರವಾಗಿದ್ದ ಪ್ರಜಾತಂತ್ರಿಯ ಸಮತಾವಾದೀ ಮಂಟಪವದು.

5. ಐದನೆಯದಾಗಿ, ಹಡಪದ ಅಪ್ಪಣ್ಣ ಅಪ್ಪಣೆ ಕೊಡಿಸಿದಂತೆ, "ಜಗದೊಳಗೆ ಹುಟ್ಟಿದವರೆಲ್ಲ ಹಗರಣಗರಾಗಿ ಹುಟ್ಟಿದರಲ್ಲದೆ, ಜಗವ ಗೆಲ್ಲಲರಿಯದೆ ನಗೆಗೆಡೆಯಾಗಿ ಹೋದರು ಎಮ್ಮ ಶರಣರು ಅಂತಲ್ಲ ಕೇಳಿರಣ್ಣಾ; ಜಗದಲ್ಲಿಯೇ ಹುಟ್ಟಿ ಜಗದಲ್ಲಿಯೇ ಬೆಳೆದು -ಜಗದಂತೆ ಇದ್ದು, ಈ ಜಗವ ಗೆದ್ದು ಹೋಗುವರು; ಜಗವ ತ್ಯಜಿಸದೇ ಜಗದೊಳಗೆ ಇದ್ದು, ಜಗವ ಗೆದ್ದು ಹೋಗಲು ಹೋರಾಡಿದವರ ಮಂಟಪವದು; ಕೊಲುವೆನೆಂಬ ಭಾಷೆ ದೇವನದು, ಗೆಲುವೆನೆಂಬ ಭಾಷೆ ಭಕ್ತನದು ಎಂಬ ಫಲವಿದ್ದವರ ಮಂಟಪ.

6. ಆರನೆಯದಾಗಿ, ಉರಿಲಿಂಗಪೆದ್ದಿ ವಿವರಿಸಿದಂತೆ, "ಪಂಕವಿಲ್ಲದೆ ಕಮಲಕ್ಕೆ ಸುಲಲಿತವೆಂತಪ್ಪುದಯ್ಯ; ಹೊನ್ನು, ಹೆಣ್ಣು, ಮಣ್ಣು ಇಲ್ಲದೆ ದೇವತಾಯೋಗ್ಯವೆಂತಪ್ಪುವುದಯ್ಯ? ಕಮಲ ಪಂಕದಲ್ಲಿ ವರ್ತಿಸಿದಂತೆ ಇಹರು ನಿಮ್ಮ ಶರಣರು, ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ" ಇಂಥ ಶರಣರ ಮಂಟಪವದು.

7. ಏಳನೆಯದಾಗಿ, ಬಸವಣ್ಣನವರು ಬಣ್ಣಿಸಿದಂತೆ, ಮಾಡುವ ನೀಡುವ ಭಕ್ತನ ಕಂಡರೆ ಸಿಥಿವಿಥಾನವ ಕಂಡಂತಾಯಿತು; ಪಾದೋದಕ ಪ್ರಸಾದಜೀವಿಯ ಕಂಡರೆ ಹೋದ ಪ್ರಾಣ ಬಂದಂತಾಯಿತು. ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ ಅಚ್ಚಶರಣರ ಕಂಡರೆ ನಿಶ್ಚಯವಾಗಿ ಕೂಡಲಸಂಗಯ್ಯನೆಂಬೆನು" ಇಂಥ ಅಚ್ಚಶರಣರ ಮಂಟಪವದು.

**ಸತ್ಯಾನ್ವೇಷಣೆಯ ಕ್ಷೇತ್ರ :-**

8. ಎಂಟನೆಯದಾಗಿ ಸಂಪೂರ್ಣ ವಿಚಾರ ಸ್ವಾತಂತ್ರ್ಯ, ವಿಮರ್ಶಾ ಸ್ವಾತಂತ್ರ್ಯವಿದ್ದ ಮಂಟಪವದು. ಅಲ್ಲಿ ಎಲ್ಲರೂ ಮುಮ್ಮೇಳದವರೇ, ಹಿಮ್ಮೇಳದವರಾರೂ ಇಲ್ಲ. ದರ್ಶನಯಲ್ಲಿ ನಿರ್ಭೀತತೆ ಮೌಲ್ಯಮಾಪನದಲ್ಲಿ ನಿರ್ದಾಕ್ಷಿಣ್ಯಪರತೆ, ನಿಲವಿನಲ್ಲಿ ವಸ್ತು ನಿಷ್ಠತೆ, ದೋಷ ನಿರ್ದೇಶನದಲ್ಲಿ ನ್ಯಾಯ ನಿಷ್ಠುರತೆ, ವ್ಯಕ್ತಿ ಗೌರವಕ್ಕಿಂತ ಗುಣಗೌರವ ದೃಷ್ಟಿ, ಪ್ರಶಂಸಾ ಪರಾಙ್ಮುಖತೆ ಇತ್ಯಾದಿಗಳಿಂದ ಸಾಮೂಹಿಕ ಸತ್ಯಾನ್ವೇಷಣೆಯ ಪವಿತ್ರ ಕ್ಷೇತ್ರವಾಗಿದ್ದಿತದು. ಗುಣದೋಷಗಳ ವಿವೇಚನೆ ಎಷ್ಟು ಕಠೋರವಾಗಿರಬಹುದಾಗಿತ್ತೆಂಬ ಬಗ್ಗೆ ಈ ಮೋಳಿಗೆಯ ಮಾರಯ್ಯನ ವಚನ ನಿದರ್ಶನ :

"ಮಹಾಮನೆಯ ಮಾಡಿ ಕೆಟ್ಟ ಬಸವಣ್ಣ;
ಹೇಳಿ ಕೆಟ್ಟ ಚೆನ್ನ ಬಸವಣ್ಣ;
ಉಂಡಿಹೆನೆಂದು ಕುಳಿತು ಕೆಟ್ಟ ಪ್ರಭುದೇವರು........
ಇವರೆಲ್ಲರೂ ಆಡುವ ಅಂದಣಗಿತ್ತಿಯ ಮನೆಯ
ಉಂಬಳಿಗಾರರಾದರು.

ಇಂಥ ಕಠೋರ ವಿಮರ್ಶೆ ಸತ್ಯದ ಹಿರಣ್ಮಯ ಪಾತ್ರೆಯನ್ನು ತೆಗೆದೊಗೆಯಲು ಅನಿವಾರ್ಯವೇ ಸರಿ.

9. ಒಂಬತ್ತನೆಯದಾಗಿ, ಚರ್ಚಿತವಾದ ವಿಷಯಗಳು ಜೀವನದಷ್ಟೇ ವಿವಿಧ, ವಿಪುಲ, ವ್ಯಾಪಕವಾದವುಗಳು. ಅನುಭವ ಮಂಟಪದ ವ್ಯಾಪ್ತಿಗೆ ಒಳಗಾಗದಿದ್ದ ವಿಷಯಗಳೇ ಆ ಕಾಲದ ದೃಷ್ಟಿಯಿಂದ ಇರಲಿಲ್ಲವೆಂದರೂ ಸಲ್ಲುತ್ತದೆ. ಎಲ್ಲ ವಿಷಯಗಳ ಬಗೆಗೂ ತೆರೆದ ಮನಸ್ಸು, ಪೂರ್ವಗ್ರಹ ದೂಷಿತವಲ್ಲದಚಿತ್ತ ಇರುವುದನ್ನು ಇರುವಂತೆ ಅರಿಯಬೇಕೆನ್ನುವ ತವಕ ಏನನ್ನೂ

[26 ನೇ ಪುಟ ನೋಡಿ]

# ಸಂಶೋಧನೆಯ ಎರಡು ಮುಖ.

—ಅಡ್ಯನಡ್ಕ ಕೃಷ್ಣಭಟ್

> ವಿಜ್ಞಾನದ ಮುನ್ನಡೆ ಎಷ್ಟೆ ಸಾಗಿದರೂ ಮಾನವನ ನಿರ್ಬಲತೆ, ಅಸಹಾಯಕತೆ ಪೂರ್ಣವಾಗಿ ಅಳಿಸಿ ಹೋಗಲಾರವು. ವಿಚಿತ್ರ ನೀರಿನ ಸಂಶೋಧನೆಯ ಬಗ್ಗೆ ಹಾಗೂ ದೇಹದ ಸ್ವರಕ್ಷಾ ವ್ಯವಸ್ಥೆಯ ಬಗ್ಗೆ ನಡೆದ ಎರಡು ಸಂಶೋಧನೆಗಳು ತಮ್ಮ ಪರಿಣಾಮಗಳ ದ್ವಿಮುಖತೆಯನ್ನು ಸಾರುತ್ತವೆ,

ಸಾಮಾನ್ಯ ನೀರಿಗಿಂತ ಶೇಕಡಾ 40 ರಷ್ಟು ಹೆಚ್ಚು ಸಾಂದ್ರ. ಕುದಿಯುವ ಬಿಂದು 100° ಸೆಂಟಿಗ್ರೇಡ್ ಅಲ್ಲ, 500° ಸೆಂಟಿಗ್ರೇಡ್. ತಣಿಸುತ್ತಾ –40° ಸೆಂಟಿಗ್ರೇಡ್ ತಲುಪಿದರೆ ಗಾಜಿನಂತೆ ಘನೀಕೃತ. ಇಂಥ ವಿಶಿಷ್ಟ ಗುಣಗಳುಳ್ಳ ವಿಚಿತ್ರ ನೀರು ಇರಬಹುದೆಂದು 1960ರ ಮೊದಲು ಕಲ್ಪಿಸಿದವರಿಲ್ಲ. ಅನಂತರ ಅದು ಉಂಟೆಂಬ ನಿರ್ಣಯದಿಂದ ಸುಮಾರು ಒಂದು ದಶಕ ಕಾಲ ಸಂಶೋಧನೆ ನಡೆಯಿತು. ಇದರ ಪರಿಣಾಮ–1960ರ ಹಿಂದಿನ ನಂಬುಗೆಯೇ ದೃಢಪಟ್ಟದ್ದು !

ವಿವಿಧ ಅಂಗಗಳ ಬದಲಿ ಜೋಡಣೆ ನಡೆಯುತ್ತಿರುವ ಈ ಕಾಲದಲ್ಲಿ ವಿಜ್ಞಾನಿಗಳ ತಲೆ ತಿನ್ನುವ ಒಂದು ದೊಡ್ಡ ಸಮಸ್ಯೆ—ದೇಹದ ಸ್ವರಕ್ಷಾ ವ್ಯವಸ್ಥೆ. ಈ ವ್ಯವಸ್ಥೆಯಿಂದ ಒಬ್ಬ ವ್ಯಕ್ತಿಯ ದೇಹವು ಪರಕೀಯ ದೇಹದ ಯಾವುದೇ ಅಂಶವನ್ನು ತನ್ನದಾಗಿಸಲು ಸುಲಭವಾಗಿ ಒಪ್ಪುವುದಿಲ್ಲ; ಬಲವಂತವಾಗಿ ಸೇರಿಸಿದ ಪರಕೀಯ ದೇಹಾಂಶವನ್ನು ತಿರಸ್ಕರಿಸುತ್ತದೆ. ಪ್ರಕೃತಿಯ ಈ ಗುಣವನ್ನು ಇಲ್ಲದಾಗಿಸುವ ಹೊಸ ವಿಧಾನವು ಕಂಡು ಬಂದಿದೆಯೆಂದು 1969 ರಿಂದ ಸುದ್ದಿ ಬಂತು. ಈ ದಿಸೆಯಲ್ಲಿ ನಾಲ್ಕೈದು ವರ್ಷಗಳಲ್ಲಿ ನಡೆದ ಪ್ರಯೋಗಗಳ ಪ ಪರಿಣಾಮ–ಇನ್ನೂ ಆ ಸಮಸ್ಯೆಯು ಮುಂದುರಿಯು

ಇವೆರಡು ಘಟನೆಗಳು ಸಂಶೋಧನೆಯ ಎ ಮುಖಗಳನ್ನು ತೋರಿಸುತ್ತವೆ.

## ಮೊದಲನೆಯ ಮುಖ

ಎನ್. ಎಸ್. ಫೆಡ್ಯಕಿನ್ ಎಂಬುವರು ಸೋ ಯತ್ ರಷ್ಯದ ಒಬ್ಬ ವಿಜ್ಞಾನಿ. ವಿಚಿತ್ರ ನೀರಿನ ತ್ವವನ್ನು ಮೊದಲಿಗೆ (1961 ರಲ್ಲಿ) ಇವರು ವ ಮಾಡಿದರು. ಮುಂದೆ ಅವರು ಮಾಸ್ಕೋದ ಭೌ ರಸಾಯನ ಸಂಸ್ಥೆ (ಇನ್‌ಸ್ಟಿಟ್ಯೂಟ್ ಆಫ್ ಫಿಸಿಕ ಕೆಮಿಸ್ಟ್ರಿ) ಯನ್ನು ಸೇರಿದರು. ಆ ಸಂಸ್ಥೆಯ ಮುಖ ಬೋರಿಸ್ ಡೆರ್ಜಾಗುಯಿನ್ ಅವರ ನಾಯಕತ್ವ ಅನೇಕ ವಿಜ್ಞಾನಿಗಳು ವಿಚಿತ್ರ ನೀರಿನ ಪರಿಶೀಲನೆಯ ಸುಮಾರು 6 ವರ್ಷಕಾಲ ನಡೆಸಿದರು.

ವಿಚಿತ್ರ ನೀರಿನ ಒಂದು ವಿಶಿಷ್ಟತೆ-ಅದು ತಂ ರಾಗಲು ಬೇಕಾದ ವಿಶೇಷ ಸ್ಥಿತಿ. ಗಾಜು ಅಥ ಕ್ವಾರ್ಟ್ಸ್‌ನಿಂದ ತಯಾರಿಸಿದ ಲೋಮನಾಳಗಳ ಸಾಮಾನ್ಯ ನೀರಿರುವ ಪಾತ್ರೆಯ ಮೇಲ್ಗಡೆ ತೂಗ ಸಬೇಕು ಲೋಮನಾಳ ಮತ್ತು ಸಾಮಾನ್ಯ ನೀ ಪಾತ್ರೆಯನ್ನು ಇನ್ನೊಂದು ಆವರಣದಲ್ಲಿರಿಸಬೇಕು ಆವರಣದಿಂದ ಗಾಳಿಯನ್ನು ಸೆಳೆದು ನಿರ್ವಾತ ಉಂ ಮಾಡಿದಂತ ವಿಚಿತ್ರ ಸಂಗ್ರಹ ಲೋಮನಾಳದಲ್ಲಾ ತ್ತದೆ. ಒಂದು ಗಂಟೆಯಲ್ಲೇ ಸಂಗ್ರಹವಾಗಲೂ ಬಹು ಹಲವು ವಾರಗಳೇ ಬೇಕಾಗಲೂ ಬಹುದು,-ಎಷ್ಟೇ ಕಾ ವಧಿಯಲ್ಲಾದರೂ ದೊರಕುವ ಪ್ರಮಾಣ ಮಾತ್ರ ಬ ಕಡಿಮೆ. ಗ್ರಾಮ್ ತೂಕದ ದಶಲಕ್ಷಾಂಶಗಳಷ್ಟು ಸಿ ವುದು ಸಾಮಾನ್ಯ ಲೋಮನಾಳಗಳಲ್ಲಷ್ಟೇ ಅಲ್ಲದೆ ಸ ಟವಾದ ಕ್ವಾರ್ಟ್ಸ್ ಫಲಕಗಳಲ್ಲೂ ಈ ವಿಚಿತ್ರ ನೀರಿ ಸಂಗ್ರಹ ಸಾಧ್ಯವೆಂದು ಮತ್ತೆ ತಿಳಿಯಿತು.

ಲವಣ, ಮೊದಲಾದ ಕಶ್ಮಲಗಳಿಲ್ಲದಂತೆ ಗ್ರೀಸ ಡೆರ್ಜಾಗುಯಿನ್ ಮತ್ತು ಸಂಗಡಿಗರು ಜಾಗ್ರತೆ ವಹಿ ದರು; ಲೋಮನಾಳಗಳ ಗಾತ್ರವನ್ನು ಬದಲಾಯಿಸಿಯ

ಪ್ರಯೋಗ ನಡೆಸಿದರು. 1966ರಲ್ಲಿ ಡೆರ್ಜಾಗುಯಿನ್ ಇಂಗ್ಲೆಂಡಿನ ಫ್ಯಾರಡೆ ಸೊಸೈಟಿಯಲ್ಲಿ ವಿಚಿತ್ರ ನೀರಿನ ಮೇಲೆ ಭಾಷಣ ಮಾಡಿದರು. ಅಲ್ಲಿಂದ ಯೂರೋಪ್ ಮತ್ತು ಅಮೇರಿಕಾದ ವಿಜ್ಞಾನಿಗಳ ಆಸಕ್ತಿ ಹೆಚ್ಚಿತು.

ರಾಸಾಯನಿಕ ಪದಾರ್ಥಗಳ ಸೂಕ್ಷ್ಮ ಪರಿಶೀಲನೆಗೆ ಅವುಗಳಿಂದ ಉಂಟಾಗುವ ವರ್ಣಪಟಲದ ಅಧ್ಯಯನ ಸಹಕಾರಿ ಎಂಬುದು ಹಲವು ದಶಕಗಳಿಂದ ತಿಳಿದಿರುವ ವಿಚಾರ. ಈ ದಾರಿ ಹಿಡಿದು ಅಮೇರಿಕದ ರಾಬರ್ಟ್ ಸ್ಟ್ರಾಮ್‌ಬರ್ಗ್ ಮತ್ತು ಎಲಿಸ್ ಲಿಪಿನ್‌ಕಾಟ್ ಮುಂದೆ ಸಾಗಿದರು. ಹಿಂದೆಂದೂ ವರದಿಯಾಗದ ಒಂದು ಅಪೂರ್ವ ರಾಸಾಯನಿಕ ಇದು ಎಂದು ಅವರು ಕಂಡುಕೊಂಡರು. ವಿಚಿತ್ರ ನೀರಿಗೆ 'ಪಾಲಿ ವಾಟರ್' ('ಪಾಲಿ ನೀರು' ಎಂದು ನಾವು ಕರೆಯೋಣ) ಎಂದು ಹೆಸರಿಟ್ಟವರೂ ಅವರೇ. 'ಆಕ್ಸಿಜನ್ (ಆಮ್ಲಜನಕ) ಮತ್ತು ಹೈಡ್ರೋಜನ್ (ಜಲಜನಕ) ಪರಮಾಣುಗಳಿಂದ ರಚಿತಲ್ಪಟ್ಟ ಷಡ್ಭುಜಾಕೃತಿಗಳು ನೆಲಕ್ಕೆ ಹಾಸಿದ ಚಪ್ಪಡಿಗಳಂತೆ ಒಂದನ್ನೊಂದು ಸ್ಪರ್ಶಿಸಿ ಕೊಂಡಿರುತ್ತವೆ' ಎನ್ನುವ ಅಣುಮಾದರಿಯ ಚಿತ್ರವನ್ನೂ ಅವರು ಮುಂದಿಟ್ಟರು.

ಇಷ್ಟಾದರೂ ಜಗತ್ತಿನ ಯಾವುದೇ ಪ್ರಯೋಗ ಶಾಲೆಯಲ್ಲಿ ಗಣನೀಯ ಪ್ರಮಾಣದಲ್ಲಿ ಪಾಲಿ ನೀರನ್ನು ಸಂಗ್ರಹಿಸಲಾಗಲಿಲ್ಲ. ಇದರಿಂದ ಅದರ ಗುಣ ವಿಶೇಷಗಳನ್ನು ತಿಳಿಯಲು ನಡೆಸಿದ ಪ್ರಯೋಗಗಳೆಲ್ಲ ಅಲ್ಪ ಪರಿಮಾಣದ ಪಾಲಿನೀರಿನ ಮೇಲೆ ನಡೆಸಿದ ಪ್ರಯೋಗಗಳಾದುವು. ಪದಾರ್ಥದ ಸೂಕ್ಷ್ಮ ಮಾದರಿಗಳಿಗೇನೇ ಸರಿಹೋಗುವ ಶೋಧನಾತಂತ್ರಗಳನ್ನು ಅನೇಕ ಪ್ರಯೋಗ ಶಾಲೆಗಳಲ್ಲಿ ಬಳಸತೊಡಗಿದರು. ಡೆರ್ಜಾಗುಯಿನ್ ಇಂಥ ತಂತ್ರಗಳನ್ನು ಮೊದಲು ಅನ್ವಯಿಸಿರಲಿಲ್ಲ. ಕ್ರಮೇಣ, ಪಾಲಿನೀರಿನ ಮಾದರಿಗಳಲ್ಲಿ ನೀರಿನ ಅಣುಗಳಷ್ಟೇ ಅಲ್ಲದೆ ಸೋಡಿಯಂ, ಸಿಲಿಕಾನ್ ಮೊದಲಾದ ಧಾತುಗಳ ಪರಮಾಣುಗಳೂ ಕಂಡು ಬಂದವು! ಲೋಮನಾಳಗಳಿಂದ ಸಿಲಿಕಾನ್ ಕರಗಿ, ತೋರಿಕೆಗೆ ವಿಚಿತ್ರ ಪದಾರ್ಥವಾದ ಪಾಲಿನೀರಿನ ನಿರ್ಮಾಣವಾಗಿದೆ ಎಂದು ಹಲವು ವಿಜ್ಞಾನಿಗಳು ಹೇಳತೊಡಗಿದರು. ಮನುಷ್ಯನ ಬೆವರನ್ನೂ ಒಳಗೊಂಡು ಅನೇಕ ಕಶ್ಮಲಗಳು ಇದಕ್ಕೆ ಕಾರಣ ಎಂದು ಬೇರೆ ಕೆಲವರು ಹೇಳಿದರು. ಸೋವಿಯತ್ ರಷ್ಯದ ವಿಜ್ಞಾನಿಗಳೇ ಡೆರ್ಜಾಗಯಿನ್ ಸ್ವತಃ ಸೂಕ್ಷ್ಮ ಮಾದರಿ ತಂತ್ರಗಳನ್ನು ಬಳಸಿದರು ಅಚ್ಚರಿಯ ಗುಣಗಳನ್ನು ಪಡೆದಿರುವ ನೀರಿನ ಭಿನ್ನರೂಪ ಇದೆ ಎಂಬ ತನ್ನ ಹಿಂದಿನ ನಂಬುಗೆಯನ್ನು ಅವರು ಕಿತ್ತೊಗೆಯಬೇಕಾಯಿತು. ಲೋಮನಾಳಗಳನ್ನು ತಯಾರಿಸುವಾಗ ನಡೆಯುವ ಉಷ್ಣ ಸಂಸ್ಕರಣ, ಸಿಲಿಕಾನ್ ಮೊದಲಾದ ವಸ್ತುಗಳೊಡನೆ ಉಂಟಾಗುವ ಪ್ರತಿಕ್ರಿಯೆ–ಇವು ವಿಚಿತ್ರವಾದ ಪಾಲಿನೀರು ಉಂಟೆಂಬ ಭ್ರಮೆಗೆ ಕಾರಣವಾದುವೆಂಬುದು ಸರ್ವವಿದಿತವಾಯಿತು.

ವಿಜ್ಞಾನ ಚರಿತ್ರೆಯಲ್ಲಿ ಪಾಲಿನೀರಿನ ಅಧ್ಯಾಯವಸ್ತು ನಿಷ್ಠ ಸಂಶೋಧನೆಯ ಅಂತಿಮ ಯಶಸ್ಸನ್ನು ಸಾರುವಂತಾಯಿತು. ಪಾಲಿನೀರು ರಹಸ್ಯ ಅವಸಾನಗೊಳ್ಳುತ್ತಿದ್ದಂತೆ ಮೂಡಿದ ಒಂದು ಆಸಕ್ತಿಯುತ ವಿಷಯ ದೇಹದ ಸ್ವರಕ್ಷಾ ವ್ಯವಸ್ಥೆಯನ್ನು ಭೇದಿಸುವ ಹೊಸ ವಿಧಾನ

**ಎರಡನೆಯ ಮುಖ:–** ವಿಲಿಯಂ ಸಮ್ಮರ್‌ಲಿನ್ ಅಮೆರಿಕದ ಸ್ಟಾನ್‌ಫರ್ಡ್ ವಿಶ್ವವಿದ್ಯಾಲಯದಲ್ಲಿದ್ದ ಒಬ್ಬ ಯುವ ವಿಜ್ಞಾನಿ. 1969 ರಲ್ಲಿ ಅವರು ಚರ್ಮಕಸಿಯ ಬಗ್ಗೆ ಪ್ರಯೋಗ ನಡೆಸುತ್ತಿದ್ದರು. ಅವರೊಮ್ಮೆ ಒಬ್ಬ ವ್ಯಕ್ತಿಯ ಚರ್ಮ ಭಾಗವನ್ನು ಪೋಷಕಾಂಶಗಳಿರುವ ಕೃತಕ ಪರಿಸರದಲ್ಲಿ (ಕಲ್ಚರ್‌ನಲ್ಲಿ) ಇಟ್ಟರು. ಎರಡು ಮೂರು ತಿಂಗಳುಗಳ ಬಳಿಕ ಹಾಗಿಟ್ಟ ಚರ್ಮದ ಮಾದರಿ ಸ್ವಲ್ಪ ಬದಲಾಯಿತು. ಸಮ್ಮರ್‌ಲಿನ್ ಅದನ್ನು ಮತ್ತೆ ಅದೇ ವ್ಯಕ್ತಿಗೆ ಕಸಿ ಮಾಡಿದರು. ಚರ್ಮ ಭಾಗವು ಬದಲಾಗಿದ್ದರೂ ದೇಹವು ಅದನ್ನು ತಿರಸ್ಕರಿಸದೆ ತನ್ನಲ್ಲಿ ಒಂದಾಗಿಸಿತು.

ಮುಂದೆ ಅವರು ಇನ್ನೊಂದು ಪ್ರಯೋಗ ಮಾಡಿದರು. ಕಲ್ಚರ್‌ನಲ್ಲಿಟ್ಟಿದ್ದ ಬಿಳಿವರ್ಣದ ಚರ್ಮವನ್ನು ಒಬ್ಬ ಕರಿ ಮನುಷ್ಯನಿಗೆ ಕಸಿ ಮಾಡಿದರು. ಆಗಲೂ ದೇಹವು ಪರಕೀಯ ಚರ್ಮವನ್ನು ತಿರಸ್ಕರಿಸಲಿಲ್ಲ. ಇದರಿಂದ ಸಾಮಾನ್ಯವಾಗಿ ಪರಕೀಯ ಅಂಗವನ್ನು ತಿರಸ್ಕರಿ

ಸುವ ದೇಹದ ಸ್ವರಕ್ಷಾ ವ್ಯವಸ್ಥೆಗೆ ಒಗ್ಗುವಂಥ ಒಂದು ವಿಧಾನ ಹೊಳೆದಂತಾಯಿತು.

ಅಮೇರಿಕಾದ ಮಿನಸೋಟ ವಿಶ್ವವಿದ್ಯಾಲಯದಲ್ಲಿದ್ದ ಹಿರಿಯ ವಿಜ್ಞಾನಿ ರಾಬರ್ಟ್‌ಗುಡ್, ಸಮ್ಮರ್ ಅವರ ಪ್ರಾವೀಣ್ಯವನ್ನು ತಿಳಿದುತಮ್ಮಲ್ಲಿಗೆ ಕರೆಸಿಕೊಂಡರು 1972 ರಲ್ಲಿ ಸಮ್ಮರ್‌ಲಿನ್ ಅವರು ಬಿಳಿ ಇಲಿಯ ಚರ್ಮವನ್ನು ಕಪ್ಪು ಇಲಿಗೂ, ಕಪ್ಪು ಇಲಿಯ ಚರ್ಮವನ್ನು ಬಿಳಿ ಇಲಿಗೂ ಕಸಿಮಾಡುವುದರಲ್ಲಿ ಯಶಸ್ವಿಯಾದರು. ಕ್ರಮೇಣ ಅವರು ತಮ್ಮ ಪ್ರಯೋಗಗಳನ್ನು ಬೇರೆ ಬೇರೆ ಜಾತಿಯ ಪ್ರಾಣಿಗಳಿಗೆ ವಿಸ್ತರಿಸಿದರು. 'ಮನುಷ್ಯರ ಮತ್ತು ಹಂದಿಗಳ ಚರ್ಮವನ್ನು ಇಲಿಗಳಿಗೆ ಕಸಿ ಮಾಡಿ ಯಶಸ್ಸು ಸಾಧಿಸಿದ್ದೇನೆ' ಎಂದರು. ಇವರ ಹಲವು ಸಂಶೋಧನಾ ಪತ್ರಗಳಿಗೆ ರಾಬರ್ಟ್‌ಗುಡ್ ಸಹಲೇಖಕರಾಗಿದ್ದರು. 1973ರಲ್ಲಿ ರಾಬರ್ಟ್‌ಗುಡ್ ಮೊನ್‌ಹಟನಿನ ಸ್ಲೋನ್ ಕೆಟರಿಂಗ್ ಕ್ಯಾನ್ಸರ್ ಸಂಶೋಧನಾ ಸಂಸ್ಥೆಯ ನಿರ್ದೇಶಕರಾಗಿ ಹೋದಾಗ ತಮ್ಮೊಡನೆ ಸಮ್ಮರ್ ಅವರನ್ನೂ ಕರಕೊಂಡು ಹೋದರು.

ಸಮ್ಮರ್ ಅವರ ವಿಧಾನದ ಸುದ್ದಿ ಜಗತ್ತಿಡೀ ಹಬ್ಬಿತು. ನೋಬಲ್ ಪಾರಿತೋಷಕ ವಿಜೇತ ಇಂಗ್ಲೆಂಡಿನ ಹ್ಯಾರೋವಕ್ಷಿದ್ದ ಸರ್ ಪೀಟರ್ ಮೆಡವರ್, ಲಂಡನಿನ ಲೆಸ್ಲಿ ಬ್ರೆಂಟ್ ಮೊದಲಾದ ಖ್ಯಾತ ವಿಜ್ಞಾನಿಗಳು ಸಮರ್‌ಲಿನ್ ತಂತ್ರವನ್ನು ತಮ್ಮ ಪ್ರಯೋಗಾಲಯಗಳಲ್ಲಿ ಪುನರಾವರ್ತಿಸಿದರು. ನಿರೀಕ್ಷಿತ ಫಲಿತಾಂಶವನ್ನು ಕಾಣದೆ ಹತಾಶರಾದರು ಒಂದೊಂದರಂತೆಪ್ರಯೋಗಗಳೆಲ್ಲಸೋಲು ಕಂಡಂತೆ ವಿಜ್ಞಾನಿಗಳು ಸಮ್ಮರಲಿನ್ ಸಂಶೋಧನೆಯ ಪ್ರಾಮಾಣಿಕತೆಯನ್ನು ಪ್ರಶ್ನಿಸತೊಡಗಿದರು ಗಂಭೀರ ಸಂಶಯ ಪೀಡಿತರಾದ ರಾಬರ್ಟ್‌ಗುಡ್ ತನ್ನ ತಂಡದಿಂದ ಮತ್ತೆ ಪ್ರಯೋಗ ನಡೆಸಿದರು. ಅವರಿಗೂ ನಿರೀಕ್ಷಿತ ಫಲಿತಾಂಶ ಸಿಗಲಿಲ್ಲ. ಸಮ್ಮರ್‌ಲಿನರೇ ತಮ್ಮ ವಿಧಾನವನ್ನು ಪುನರಾವರ್ತಿಸಲು ಅಸಕ್ತರಾದರು. ದೇಹದ ಸ್ವರಕ್ಷಾ ವಿಜ್ಞಾನದಲ್ಲೊಂದು ಮೈಲಿಗಲ್ಲೆಂದು ಭಾವಿಸಿದ್ದ ವಿಧಾನವೇ ತೀವ್ರ ವಿವಾದಕ್ಕೊಳಗಾಯಿತು

ಇಲಿಗಳಿಗೆ ರಂಗುಕೊಟ್ಟು ಹೊಸ ವಿಧಾನದ ನಾಟಕ ಆಡಿದ್ದಾರೆ ಎಂದು ಸಂಸ್ಥೆಯ ಕೆಲವು ಸಂಶೋಧಕರು ಸಮ್ಮರ್ ಅವರನ್ನು ದೂರಿದರು. ವಂಚನೆಯ ಸಂಶಯ ಹೆಚ್ಚಿತು. ತಾವು ಕರೆದು ಪ್ರೋತ್ಸಾಹಿಸಿದ ಸಮ್ಮರ್ ಅವರನ್ನು ರಾಬರ್ಟ್‌ಗುಡ್ ತಾತ್ಕಾಲಿಕವಾಗಿ ಕೆಲಸದಿಂದ ತೆಗೆದು ಹಾಕಿದರು. ವಿಚಾರಣಾ ಸಮಿತಿಯ ನೇಮಕವಾಯಿತು. 1974 ರಲ್ಲಿ ಸಮ್ಮರ್‌ಲಿವರದ್ದು ವಂಚನೆಯ ಸಂಶೋಧನೆಯೆಂದು ಸ್ಥಿರವಾಯಿತು. ಮೊದಲಿಗೆ ಸಮ್ಮರ್‌ಲಿವರಿಗೆ ಜಯ ಸಿಕ್ಕಿದ್ದಿರಬಹುದು. ಅದೊಂದು ಆಕಸ್ಮಿಕವಾಗಿದ್ದಿರಬಹುದು ಎಂದು ಕೆಲವರು ಸಹಾನುಭೂತಿ ತೋರಿದರು. ಸಮ್ಮರ್‌ಲಿವರ ಮಾನಸಿಕ ಆರೋಗ್ಯ ಉತ್ತಮವಾಗಿರದಿದ್ದುದರಿಂದ ಇಂಥಪ್ರವೃತ್ತಿಗೆ ಕಾರಣ ಎಂದು ರಾಬರ್ಟ್‌ಗುಡ್ ವಿವರಣೆ ನೀಡಿದರು. ಹೊಸ ವಿಧಾನದ ಅಸ್ತಿತ್ವದ ಅಸ್ತಮಾನದೊಂದಿಗೆ ಸಮ್ಮರ್‌ಲಿವರು ಉದ್ಯೋಗವನ್ನು ಕಳೆಕೊಂಡರು.

ಸಮ್ಮರ್‌ಲಿನ್ ಪ್ರಕರಣದಿಂದ ಸತ್ಯಾನ್ವೇಶಕ ವಿಜ್ಞಾನಿಗಳ ಆಸೆ ಆಮಿಷಗಳಿಗೆ ಕನ್ನಡಿ ಹಿಡಿದಂತಾಯಿತು.

ವೈಜ್ಞಾನಿಕ ವಿಧಾನವನ್ನು ನಿಷ್ಠೆಯಿಂದ ಅನುಸರಿಸಿದರೆ ಆದಷ್ಟು ಬೇಗ ತಿಳಿಯದೆ ಹಿಡಿದ ತಪ್ಪುದಾರಿಯನ್ನು ಗುರುತಿಸಬಹುದು–ಇದು ಪಾಲಿನೀರಿನ ಆಗಮನ ನಿರ್ಗಮನದಿಂದ ತಿಳಿಯುವ ನೀತಿ. ಕೀರ್ತಿ, ಸಂಪತ್ತಿಗಾಗಿ ಸಂಶೋಧನೆಯಲ್ಲಿ ನಡೆಯುವ ಮೋಸದಿಂದ ಸಂಶೋಧನೆಯ ಬಗ್ಗೆ ಸಾರ್ವಜನಿಕರ ದುರಭಿಪ್ರಾಯ ಹುಟ್ಟುತ್ತದೆ. ಅದರ ಗತಿ ಮೊಟಕುಗೊಳ್ಳುತ್ತದೆ ಕೊನೆಗೂ ಸತ್ಯ ಬಯಲಾಗುತ್ತದೆ. ಇದು ಸಮ್ಮರ್‌ಲಿನ್ ಪ್ರಕರಣದಂಥ ಅಡ್ಡದಾರಿಯ ಶೋಧನೆಯಾಗಲಿ ವಿಜ್ಞಾನ ಚರಿತ್ರೆಯಲ್ಲಿ ಹೊಸದಲ್ಲ. ವಿಜ್ಞಾನದ ಮುನ್ನಡೆ ಎಷ್ಟೇ ದಶಕಗಳ ತನಕ ನಡೆದರೂ ಮನುಷ್ಯನು ಕೆಲವು ನಿರ್ಬಲತೆಗಳು ಮತ್ತೆ ಮತ್ತೆ ಕಾಣಿಸುತ್ತವೆ ಎಂಬುದಕ್ಕೆ ಇತ್ತೀಚಿಗಿನ ವರ್ಷಗಳಲ್ಲಿ ನಡೆದ ಈ ಎರಡು ದೃಷ್ಟಾಂತಗಳು ಸಾಕ್ಷಿ.

—o—

## ಮ ಹಾ ನು ಭಾ ವ

# ಕಕೋಳ ಶ್ರೀ ಮಡಿವಾಳಯೋಗಿಗಳು

—ಎಸ್. ಮಲ್ಲಿಕಾರ್ಜುನ

ಮಡಿವಾಳರು ಮೊದಲು ನಡೆದರು ನಂತರ ನುಡಿದರು. ಕರ್ಮಜೀವಿಗಳಾಗಿ ಇತರರಿಗೆ ಆದರ್ಶ ಮಾರ್ಗ ದರ್ಶನ ನೀಡಿದರು. ಮಾನವನಾಗಿದ್ದುಕೊಂಡೇ ಮಹಾದೇವನಾಗುವ ಬಗೆಯನ್ನು ಬಾಳಿ ತೋರಿದ ಪವಾಡ ಪುರುಷರಿವರು.

ಕರ್ನಾಟಕದಲ್ಲಿ ಕಡಕೋಳಗಳೆಂಬ ಊರುಗಳ ೀತವಿದ್ದರೂ ಕಲ್ಯಾಣದ ಕಂಗಳಾಗಿ, ಸಗರನಾಡಿನ ಖರವೆನಿಸಿ, ಅಭಿನವ ಕಲ್ಯಾಣ(ಕಲ್ಬುರ್ಗಿ)ದ ಹೆಬ್ಬಾ ಲಿನ ಹೊಸ್ತಿಲಂತೆ ಹೊಳೆಯುತ್ತಿದೆ ಕಡಕೋಳ. ದುವೇ ಅನುಭಾವದ ಅಗ್ರಗಣ್ಯ ಶ್ರೀ ಮಡಿವಾಳ ಶಿವ ಯೋಗಿಗಳ ಭಕ್ತಿ ಸಾಮ್ರಾಜ್ಯದ ಮುಕ್ತಿಧಾಮ. ಅಥವಾ ಾಪವನ್ನು ಕಳೆದುಕೊಳ್ಳುವ ಕಡೆಯಕೊಳ್ಳ. ದಕ್ಷಿಣೋ ತ್ತರವಾಗಿ ತುಂಬಿ ಹರಿಯುವ ತ್ರಿವೇಣಿಯರ ಸಂಗಮ. ಭಾಗೀರಥಿಯ ಇಕ್ಕೆಲಗಳಲ್ಲಿ ಸಂಗಮನ ಗುಡ್ಡ ಹೀಗೆ ೇರು ಊರುಗಳ ಮಧ್ಯದಿ ಮೆರೆಯುವುದು ಸುರರ ುೇರುವಿನ ಮೇಲೆ ಮಡಿವಾಳರ ಮಠ. 'ಅನುಭಾವದ ಅರ್ಥಬೇಕಾದರೆ; ಗುರುವಿನ ಮಹತಿ ಅರಿಯಬೇಕಾದರೆ; ನಜನೆಯೆಂದರೆ ಕಡಕೋಳ ಕಾಣ್ಬೇಕು.' ಕಡಕೋಳದಲ್ಲಿ ಾಗೆಯ ಜೀವನವು ಪಾವನವಾಗಿದೆ'. 'ಇಲ್ಲಿ ಕತ್ತೆಕೂ ಾದರೂ ಕೂಡ ಶಾಸ್ತ್ರೋಕ್ತವಾಗಿ ಕೂಗುತ್ತದೆ.' ಎಂಬ ಇತ್ಯಾದಿ ಇಲ್ಲಿಯ ನಾಣ್ಣುಡಿಗಳು ಅತ್ಯುಕ್ತಿಗಳಲ್ಲ. ಈ ್ವಿತೀಯ ಕೈಲಾಸದಲ್ಲಿ ಇಂದಿಗೂ ಪ್ರತಿ ಮಗುವಿನಿಂದ ುರುವ ಮಾತು; ಹಾಡುಗಳು ಶಿವನಾಮ, ಮಡಿವಾಳರ ಮರಿ ನುಡಿಗಳು. ಆ ಮಗುವಿಗಿರುವ ತಾಳ, ಲಯ, ರಸ, ಪ್ರಾಸ, ಧ್ವನಿ ಮುಂತಾದವುಗಳು ಬೆನ್ನಟ್ಟಿ ಬಂದವು.

ಮಡಿವಾಳರು ಬಸವೋತ್ತರ ಕಾಲೀನರು ಇವರ ವಂಶಜರು ವಿಜಾಪುರ ಜಿಲ್ಲೆಯ ನಾಗರಾಣದವರಾದರು. ಇವರ ಹುಟ್ಟೂರು ಕಲ್ಬುರ್ಗಿಯ ಅಫಝಲಪುರ ತಾಲೋಕಿನ ಬಿದನೂರು. (ಕ್ರಿ. ಶ. 1800) ಚಿಣಮ ಗೇರಿ ಗುಡ್ಡದ ಶ್ರೀ ಮಹಂತೇಶ್ವರರ ವರಪ್ರಸಾದದಿಂದ ಗಂಗಮ್ಮ ಎಂಬ ಶಿವಭಕ್ತೆಯ ಉದರದಲ್ಲಿ ಉದಯಿಸಿ ದರು. ಬೆಳೆದು ದೊಡ್ಡವರಾಗಿ ಮಹಂತರ ದಿವ್ಯ ಸಾನ್ನಿ ಧ್ಯದಲ್ಲಿದ್ದುಕೊಂಡು ಅಧ್ಯಾತ್ಮದ ಅಭ್ಯಾಸ ಮಾಡಿದರು. ಅರಳಗುಂಡಿಗೆಯ (ಕಲ್ಬುರ್ಗಿಯ) ಶ್ರೀ ಶರಣಬಸವೇಶ್ವರ ರಿಂದ ಮಾಹೇಶ್ವರ ದೀಕ್ಷೆಯಾಯಿತು ತನ್ನ ವರಗುರು ಮಹಾಂತನನ್ನು ಪ್ರತ್ಯಕ್ಷವಾಗಿ ಕಾಣಲು ಶ್ರೀ ಶೈಲದಲ್ಲಿ ಹನ್ನೆರಡು ವರುಷಗಳವರೆಗೆ ಕಠಿಣ ತಪಸ್ಸನಾಚರಿಸಿ ಪ್ರತ್ಯಕ್ಷವಾಗದಿರಲು ತೂರ್ಯದಿಂದ ಹೋಗಿ ಕಮರಿಕೊಳ್ಳ ಹಾರುವಾಗ ಶ್ರೀಗುರು ಮಹಂತ ಬಂದು ತನ್ನ ದಿವ್ಯ ಕರಗಳಿಂದ ಹಿಡಿದು ನಿಜರೂಪ ತೋರಿಸಿ ನಾಲಿಗೆಯ ಮೇಲೆ ಜ್ಞಾನೋದಯದ ಬೀಜಬಿತ್ತಿ, ಲೋಕ–ಕಲ್ಯಾಣ ಕ್ಕಾಗಿ ಅಮೂಲ್ಯ ಕೊಡುಗೆಯಾಗಿ ಮಡಿವಾಳರನ್ನು ಕಡಕೋಳಕ್ಕೆ ಕಳಿಸಿಕೊಡುವರು.

ಶ್ರೀ ಮಡಿವಾಳರ ಅನುಭವದ ಜ್ಞಾನ ಪ್ರಸಾರ ಅಂದಿನಿಂದಲೇ ಅಲ್ಲಿಂದಲೇ ಪ್ರಾರಂಭ. "ಏನಾಗದೇನಾ ಗದೋ। ಹರಸಿನ್ನೊಲಿಸುವದೇನಾಗದೋ ॥ ಹಮ್ಮನ ಳಿದು ತಾಸುಮ್ಮನಿದ್ದರೆ ಬ್ರಹ್ಮನೊಲಿಸುವದೇನಾಗದೋ॥" –ಎಂದು ಹಮ್ಮನಳಿದವನೇ ನಿಜ ಬ್ರಹ್ಮ ಇದು ಗುರು ವಿನ ಒಲಿಸುವ ಪರಿ. ಈ ರೀತಿಯಾಗಿ ತಮ್ಮ ಜೀವನದ ಪ್ರತಿ ಹೆಜ್ಜೆ, ಹೆಜ್ಜೆಗೂ ಆಗುವ ಘಟನೆಗಳನ್ನು ಸ್ವಾನು ಭಾವದೊಂದಿಗೆ ಜನರಾಡುವ ನುಡಿಗಳಲ್ಲೇ ಹಾಡಿದರು. ಹಳ್ಳಿಗರ ಮಾತುಗಳೇ ಇವರ ಅನುಭಾವ ಸಂಪತ್ತಿನ ಮಾಧ್ಯಮ.

ಮಡಿವಾಳರು ತಮ್ಮ ನಿಜ ಮನಸ್ಸಿನೊಡನೆ ಅದನ್ನು ಸಾಂಸಾರಿಕ ಅಥವಾ ಸಾಮಾನ್ಯ ಮಾನವನಿಗೆ ಹೋಲಿಸಿ ಅದರೊಡನೆ ಅದರ ಇಚ್ಛೆಯನುಗುಣವಾಗಿ ನಡೆದು ಆಗುವ ಎಲ್ಲ ಘಟನೆಗಳನ್ನು ಬಹುಮಾರ್ಮಿಕ

ವಾಗಿ ಹೌದೆನ್ನುವಂತೆ ಹೇಳಿದ್ದಾರೆ. ನಿದರ್ಶನಕ್ಕಾಗಿ ಒಮ್ಮೆ ಮಡಿವಾಳರು ಭಕ್ತರೊಬ್ಬರ ಮನೆಗೆ ಊಟಕ್ಕೆ ಹೋಗಿದ್ದರು, ಊಟದಲ್ಲಿ ಅವರಿಗೆ ಬದನೆ ಕಾಯಿ ಪಲ್ಯ ಬಹು ರುಚಿಸಿ ಇನ್ನೊಮ್ಮೆ; ಇನ್ನೊಮ್ಮೆ ನೀಡಿಸಿಕೊಂಡು ಉಂಡರೂ ಹಂಬಲ ಹಿಂದಾಗದೆ ತಮ್ಮ ಊರಿಗೆ (ಕಡಕೋಳ) ಬಂದು ಸ್ವತಃ ಬಾವಿ ತೋಡಿ, ತೋಟಮಾಡಿ ಬದನೆಕಾಯಿ ಬೆಳೆದು ಒಂದು ಹಂಡೆ ಯಷ್ಟು ರುಚಿಕಟ್ಟಾದ ಬದನೆಕಾಯಿ ಪಲ್ಯಮಾಡಿ ಮುಂ-ದಿಟ್ಟುಕೊಂಡು ಮನಸ್ಸಿಗೆ ತಿನ್ನಲು ಆಜ್ಞೆಯಿತ್ತರು. ಎಲೆ ಮನವೇ, ಅಲ್ಲಿ ಅಂದು ಭಕ್ತರ ಮನೆಯಲ್ಲಿ ಬೇಡು ತ್ತಿದ್ದಿಯಲ್ಲ ಬೇಡಿ ನೀಡಿಸಿಕೊಂಡು ಉಂಡು ಹಂಬಲ ಹಿಂದಾಗದೇ ಇಂದು ಹಂಡೆಯಷ್ಟಿದೆ ತಿನ್ನು ಎಂದು ಮಾನವ ಎಂಬ ಮನಸ್ಸಿನೊಡನೆ ಮಾತಾಡಿ,

। ಬೇಡಿಉಣ್ಣೋ ನೀಡಿದಷ್ಟು। ಮಾಡಿ ಉಣ್ಣೋ ಬೇಕಾದಷ್ಟು। ಎಂದು ನಿಜಕಾಯಕದ ರೀತಿ ಯನ್ನು ಎತ್ತಿ ತೋರಿಸಿ 'ಕಾಯಕವೇ ಕೈಲಾಸ' 'ಆಳಾಗಿ ದುಡಿದು ಅರಸಾಗಿ ಉಣ್ಣಲು ಯಾವ ಅಭ್ಯಂತರವಿಲ್ಲ' ವೆಂದಿದ್ದಾರೆ ಇದರಂತೆ ರಟಕಲ್ ದೇಶಮುಖರ ಹೊಲ ದಲ್ಲಿ ತಮ್ಮ ಮನಸ್ಸು ಕಬ್ಬು ಕದ್ದ, ತಿಂದುದ್ದು; ಮಹಾ ರಾಷ್ಟ್ರ ಮಹಾಸ್ವಾಮಿಗಳೊಬ್ಬರಿಗೆ ಮನದ ಮೈಲಿಗೆ ತೊಳೆ ಯುವ ಬಗೆಯನ್ನು-'ಎಷ್ಟುತೊಳೆಯಲೆಮ್ಮ ಮನದ ಮೈಲಿಗೆ ಹೋಗದಮ್ಮ। ಕೆಮ್ಮಿ ಕ್ಯಾಕರಿಸಿ ದೇಹವ ತೊಳಿದರ ವಾಸನ್ಹೋಗದಮ್ಮ।' ಎಂದು ಹೊರಗೆ ಸ್ನಾನ ಮಾಡಿದ ಮಾತ್ರಕ್ಕೆ ನಾವು ಮಡಿಯಾಗಲಿಲ್ಲ ಮನದೊಳಗೆ ಮಲಿತು ನಿಂತ ಮಡುವನ್ನು ಸ್ವಚ್ಛಗೊಳಿಸುವ ರೀತಿ ಯನ್ನು ಹೇಳಿದ್ದಾರೆ.

ಮಡಿವಾಳರು ಕಣ್ಣಿಗೆ ತೀರ ಸಾಮಾನ್ಯರಾಗಿದ್ದು ಕೊಂಡು ಕಸಗುಡಿಸುವದು, ಕುಳ್ಳಹಚ್ಚುವದು; ಮಜ್ಜಿಗೆ ಮಾಡುವದು ಈ ಎಲ್ಲ ಕೆಲಸಗಳಿಂದ ದಾಸೋಹ ನಡೆಸು ವಾಗ ಹಲವಾರು ಜನ ಶಿವ ಶರಣರು ಬಂದು ಇವರಿಗೆ ಸಂಸಾರದ ಮಾಯೇ ಬಡಿದಿರುವದೆಂದು ಗಂವ್ಹಾರ ಶಾಸ್ತ್ರಿ ಗಳು ನುಡಿದಾಗ 'ಮಾಯಿಯಾವುದ್ಹೇಳೋ ಶಾಸ್ತ್ರಿ। ಇದರ ಆಯತ್ವನರಿಯದೇ ಬಾಳ ಬಾಯಿ ಶಾಸ್ತ್ರಿ।' ಎಂದು ಯೋಗ್ಯ ರೀತಿಯ ಅರ್ಥವತ್ತಾದ ಉತ್ತರ ನೀಡಿದರು.

ಹೀಗೆ ಸಂದರ್ಶನಕ್ಕೆ ಬಂದವರಿಗೆಲ್ಲ ಅವರ ಪ್ರಶ್ನೆ[illegible] ಅನುಭವದ ಹಾಡುಗಳಲ್ಲೇ ಉತ್ತರವೀಯುತ್ತಿ[illegible] ಪ್ರಪಂಚದಲ್ಲಿದ್ದುಕೊಂಡೇ ಪಾರಮಾರ್ಥಿಕತೆಯನ್ನು[illegible] ಯುವ ಬಗೆಯನ್ನು ಸಾಂಸಾರಿಕರಿಗೆಲ್ಲ ಸಾದರ ಪಡಿಸಿ[illegible] ಸಂಸಾರಿಕನೂ ಸಾರ್ಥಕನಾಗಬಲ್ಲನೆಂದು ಆತ್ಮ[illegible] ಯಾಗಿ ವಾದಿಸಿದ್ದಾರೆ

ಮಡಿವಾಳರು ಮೊದಲು ನಡೆದರು, ಅನ[illegible] ನುಡಿದರು. ತಾವು ಸ್ವತಃ ದುಡಿದರು, ಪ್ರಾಯೋಗ ಜೀ[illegible] ಸಾಗಿಸಿ ಜನರಿಗೆ ಆದರ್ಶ ಮಾರ್ಗದರ್ಶನ ನೀಡಿದ[illegible] ಇಂದಿಗೂ ಅವರು ಮಾಡಿದ ಒಕ್ಕಲುತನ, ತೋಟಗಾ[illegible] ಮಂದಿರ,ಕಟ್ಟಡ ಇವೆಲ್ಲಕ್ಕೂ ಮಿಗಿಲಾಗಿ ಕನ್ನಡ [illegible] ಕೋಟಿಗಲ್ಲದೇ ಇಡೀ ಮಾನವ ಜನಾಂಗಕ್ಕೇ ತಮ್ಮ [illegible] ಭಾವ ಸಂಪತ್ತನ್ನು ಮೀಸಲಾಗಿರಿಸಿದ್ದಾರೆ.

ಅಗೋಚರವಾದ ಅನುಭಾವವನ್ನು ತಮ್ಮ [illegible] ಗಡಣದಲ್ಲಿ ಹಿಡಿದಿರಿಸಿ ಆ ಅತೀಂದ್ರಿಯ ಅನುಭಾ[illegible] ಅಂತರಂಗರತ್ನವನ್ನು ಜನಸಾಮಾನ್ಯರಿಗೂ ಅನಂದವಾ[illegible] ವಂತೆ ಹೇಳಿದ್ದಾರೆ.

ಯಲೋ ಯಲೋ ಹುಟ್ಟಿ ಏನ ಪಡದಿ।
ನಿನ್ನ ನೆಲೆ ತಿಳಿಯದೇ ಸುಳ್ಳೇ ಹೊತ್ತುಗಳದಿ॥

ಆದುದರಿಂದ ಏ ! ಮಾನವನೇ-

ಜೀವ ಇರೋತ-ಖರೇ ಆಧ್ಬೇಕು।
ಜೀವ ಶಿವನೆಂಬ ಗೊತ್ತು ತಿಳಿಯಬೇಕು॥

ಎನ್ನುತ್ತಾ-

ಹುಡುಕಿಕೊಳ್ಳೋ ಮಹಾಜ್ಞಾನ।
ಅದು ನಿನ್ನ ಕೂನ। ಬಹು ನಿಧಾನ ನಿಜಧ್ಯಾನ
ಅನುಸಂಧಾನ ಅಮೃತ ಪಾನ।
ನಿನ್ನಲ್ಲಿರುವ ನಿಜಜ್ಞಾನ ನಿನ್ನಲ್ಲೇ ಅರಸು-ಅಲ್ಯಾಕೋ
ಹುಡುಕುತಿ। ಇಕೋ ಇಲ್ಯಾದ ನೋಡ ಮುಕುತಿ॥

ಅದು ನಿನ್ನಲ್ಲೇ ಇದೆ ನಿನ್ನರಿವೇ ನಿನ್ನ ಗು[illegible] ಅದನ್ನು "ಅರಿವಿನೊಳು ಇರುವೆ"ಯಾಗಿ ಅರಸು ಅ[illegible] ನಿನಗೆ ದೊರೆಯುವುದು.

ಹೀಗೆ ಅನಂತ ಅನುಭವದ ಇಂತಹ ಪದಗಳನ್ನು ರಚಿಸಿ, ಸ್ವರವಚನಗಳನ್ನು ಕೈ ವ ಲ್ಯ ಸಾ ಹಿ ತ್ಯ ಕ್ಕೆ "ಕೈವಲ್ಯ ವಾಕ್ಯಾಮೃತ" ವೆಂಬ ಕೊಡುಗೆಯನ್ನು ನೀಡಿ ಕನ್ನಡ ಕೈವಲ್ಯದ ಚತುರ್ಮುಖ ಬ್ರಹ್ಮರಲ್ಲೊಬ್ಬರಾಗಿ ಕನ್ನಡ ಕೈವಲ್ಯ ಸಾಹಿತ್ಯಕ್ಕೆ ಶ್ರೀಮಂತಿಕೆಯನ್ನು ತಂದು ಕೊಟ್ಟಿದ್ದಾರೆ, ಅದರಂತೆ "ಗಾಳಿ ಪೂಜೆ ವಚನ" "ನಿಜ-ಲೀಲಾನುಭವ ವಚನ" "ಮಹಾಂತ ಸ್ತೋತ್ರ" "ಮಹಾಂತೇಶ್ವರ ನಾಮಾವಳಿ" ಎನ್ನುವವು ಇವರ ಕೃತಿಗಳೆಂದು ಈಗೀಗ ತಿಳಿದು ಬಂದಿದೆ. ಇವರ ಒಂದು ವಚನದಿಂದ 1750 ಇವರ ನಿಜಪದಗಳು, ವಚನಗಳೆಂಬುದು ವ್ಯಕ್ತವಾದರೂ ಇವರದೇ ಆದ ಇನ್ನೊಂದು ಅನುಭವದ ಪದದಿಂದ(ನಮ್ಮೂರಲ್ಲಿ ಸಾಧು ಮಹಾಂತಪ್ಪನವರು ಇಂದಿಗೂ ಹಾಡುತ್ತಾರೆ) 1100 ನಿಜಪದಗಳು, ಪ ದ ಕ್ಕೊಂದು ಮಂಗಾಳಾರತಿ ಪದ ಅಂದರೆ (1100) 2200 ಇವರ ನಿಜಪದ ಮಂಗಳಾರತಿಪದಗಳೆಂದ ಮೇಲೆ ವಚನಗಳು 1100 ಇರಬೇಕು ಹೀಗಾಗಿ 3300 ಇವರ ರಚನೆಗಳು, ಅಲ್ಲದೇ ಇವರಿಗೆ 1100 ಶಿಷ್ಯವೃಂದವಂತೆ. ಇದೆಲ್ಲವನ್ನೂ ಅಳವಡಿಸಿಕೊಂಡೇ ಇರುವ ಒಂದು ಅನುಭವ ಪದವುಂಟು.

ಬಸವಣ್ಣನವರ ಮಾದರಿಯಲ್ಲೇ ಶಿವಾನುಭವ ಗೋಷ್ಠಿಯನ್ನೇರ್ಪಡಿಸಿ ಅದರಲ್ಲಿ ಖೈನೂರು ಕೃಷ್ಣಪ್ಪ; ಕಡ್ಲೊಡ ಸಿದ್ದಪ್ಪ; ತೆಲಗಬಾಳ ಜೀರಾ ರಾ ಮ ಪ್ಪ, ಕ್ವಾಡಲಗಿ ಬಸವಲಿಂಗಪ್ಪ ಹೀಗೆ ಎಲ್ಲಾ ಜಾತಿಯವರು ಭಾಗವಹಿಸಿ ಸಮಾಜವಾದದಂಥ ಶ್ರೇಷ್ಠ ತತ್ವವನ್ನು ಪ್ರತಿಪಾದಿಸಿದ್ದಾರೆ. ಈ ಮಹನೀಯರು ಶ್ರೇಷ್ಠ ಶರಣರಾಗಿದ್ದಾ ರೆ.

ಮಡಿವಾಳರ ರಚನೆಗಳು ತುಂಬಾ ಮಾರ್ಮಿಕ. ಕಣ್ಣಿಗೆ ಮಾತ್ರ ಸರಳವಾಗಿವೆ ಆಡಂಬರ ರಹಿತವಾದವುಗಳು ಹಾಗೂ ಆತ್ಮನಿವೇಧನೆಯೊಂದಿಗೆ ಅ ಧ್ಯಾ ತ್ಮ ದ ಚಿಂತನ ಜೊ ತೆ ಗೆ ಅನುಭಾವದ ಮಂಥನ ಮಾಡಿರುವ ಇವರ ತತ್ವಗಳನ್ನು ಆಚರಿಸಿ ನಡೆದರೆ ಜೀವನ ಪಾವನ, ಮಾನವ ಜನಾಂಗಕ್ಕೇ ಸ್ಫೂರ್ತಿ ಚೇತನ. ಇವರ ಹಿರಿಮೆ ವಿಶ್ವ ಕಲ್ಯಾಣದ ಗ ರ್ಭ ದಿಂ ದ ಜನಿಸಿದುದಾಗಿದೆ. ಅಂತೆಯೇ ಅವರು ವಿಶ್ವದ ಸೊತ್ತು. ಇಡೀ ಮಾನವ ಜನಾಂಗದ ಅಮೌಲ್ಯ ಆಸ್ತಿ. ಸಮಾಜದಲ್ಲಿ ಹುದಗಿರುವ ಮೂಢನಂಬಿಕೆ, ಧರ್ಮಾಂಧತೆ, ಸಾಮಾಜಿಕ ವೈಷಮ್ಯಗಳಂಥ ಅನಿಷ್ಟದೊಡನೆ ಹೋರಾಟ ನ ಡೆ ಸಿ ಜಯಸಿ ಸತ್ಯ ಪರತೆ, ಸಮ್ಯಕ್ ಜೀವನ, ಸ ತ್ಕಾ ರ್ಯ, ನಿಷ್ಠೆಗಳಿಗೆ ಆ ದ್ಯ ತೆ ನೀ ದ ಮಹಾಮಾನವ.

"ಲೌಕಿಕದಲ್ಲಿದ್ದುಕೊಂಡು ಅಲೌಕಿಕತೆಯನ್ನು ವಶಪಡಿಸಿಕೊಂಡು ಜೀವನಲ್ಲಿಯೇ ಶಿವನನ್ನು; ಮಾನವನಾಗಿಯೇ ಮಹಾದೇವನಾಗುವ ಬಗೆಯನ್ನು ತೋರಿಸಿ ವಿಶ್ವಜೀವನ ಬದುಕಿದ ಅ ಮ ರ ಅನುಭಾವಿ. ವಿಶ್ವದ ಮಹಾ ಪುರುಷ, ಅರಿವಿನ ಬೆಳಗನೀಕ್ಷಿಸಿದ ದ್ರಷ್ಟಾರ ಮಡಿವಾಳ! ಹೀಗೆ ಮಡಿವಾಳರು ಪವಾಡ ಪುರುಷರಾಗಿ ವಿಶ್ವಜೋತಿಯಾಗಿ ಮಾಯೆಯ ಗಂಡನಾಗಿ; ಮಹಾಂತನೆಂಬ ಅಂಕಿತ ನಾಮದಿಂದ ಅಸಂಖ್ಯಾತ ಹಾಡುಗಳನ್ನು ಕನ್ನಡ ಸಾ ರ ಸ್ವ ತ ಪ್ರಪಂಚಕ್ಕೆ ನೀಡಿದ್ದಾರೆ.

ಬಿದನೂರಿಲ್ಲಿ ಬೀ ಜ ವಾ ಗಿ, ಚಿಣಮಗೇರಿಯಲ್ಲಿ ಚಿಗುರಿ. ಅಂಳ ಗುಂಡಿಗೆಯಲ್ಲಿ ಅರಳಿ, ಕೊನೆಗೆ ತಡಕೋಳದಲ್ಲಿ ತಡೆಯಾದ ಮಡಿವಾಳರು ಅಮರರು —

ರಸ್ತೆಯಲ್ಲೂ ಹೀಗೊಂದು ಆದೇಶ ಬಂದರೆ ಶಬ್ದ ಕಡಮೆ
ಯಾಗುವುದೇನೊ ?

ಮನುಷ್ಯನ ಶ್ರವಣೇಂದ್ರಿಯಕ್ಕೆ ಒಂದು ಮಿತಿ ಇದೆ. ಅದು ಮೀರಿದರೆ ಕಿವಿ ಕಿವುಡಾದೀತು. ಹತ್ತೊಂಬತ್ತು ವರ್ಷದ ಒಬ್ಬ ಹುಡುಗ ಒಬ್ಬ ಧ್ವನಿಪಂಡಿತನ (Audiologist) ಬಳಿಗೆ ಹೋಗಿ ತನ್ನ ಕಿವಿ ಸರಿಯಾಗಿ ಕೇಳುವುದಿಲ್ಲ ಎಂದ. ಆದರೆ ಹುಟ್ಟಿದಾರಭ್ಯ ತನ್ನ ಕಿವಿ ಸರಿಯಾಗಿಯೇ ಇತ್ತು ಎಂದೂ ಹೇಳಿದ. ಅವನ ಸ್ನೇಹಿತರು ಇತ್ತೀಚಿಗೆ ತನ್ನನ್ನು ಕಿವುಡು ಎಂದು ಕರೆಯುತ್ತಿದ್ದಾರೆ, ಏನಾದರು ಮಾಡಿ ಕಿವಿ ಸರಿಮಾಡಿ ಎಂದು ಗೋಗರೆದ. ಪರೀಕ್ಷೆ ಮಾಡಿ ನೋಡಿದಾಗ ಆ ಹುಡುಗನ ಕಿವಿ ಅರವತ್ತು ವರ್ಷ ವಯಸ್ಸಿನವರ ಕಿವಿಯಂತಾಗಿದ್ದುದು ತಿಳಿಯಿತು. ದೊಡ್ಡನಗರಗಳಲ್ಲಿ ಕಾಲೇಜ್ ವಿದ್ಯಾರ್ಥಿಗಳು ತಮ್ಮ ಸ್ವಂತ ಊರಿಗೆ ರಜಾ ಕಾಲದಲ್ಲಿ ಹಿಂತಿರುಗುವ ವೇಳೆಗೆ ಅರ್ಧ ಕಿವುಡಾಗಿರುತ್ತಾರೆ ಎಂದು ಟೆನೆಸ್ಸಿ ವಿಶ್ವವಿದ್ಯಾನಿಲಯದ ಡಾ|| ಲಿಪ್‌ಸ್ಕಾಂಟ್ ಅಭಿಪ್ರಾಯಪಟ್ಟಿದ್ದಾರೆ.

# ಶಬ್ದ ಮಲಿನತೆ

— ಚಿ. ಗೋ. ರಮೇಶ್

> ಕಿವಿಗಡಚಿಕ್ಕುವ ಶಬ್ದ ನಮ್ಮ ಜೀವನದ ನೆಮ್ಮದಿಯನ್ನು ಕದಡುವುದಷ್ಟೇ ಅಲ್ಲ, ನಮ್ಮನ್ನು ಕಿವುಡರನ್ನಾಗಿಯೂ ಸಂಕಷ್ಟಕ್ಕೀಡು ಮಾಡುತ್ತದೆ. ಗದ್ದಲದ ವಿರುದ್ಧ ಯುದ್ಧ ಹೂಡಬೇಕಾದ ಕಾಲ ಸನ್ನಿಹಿತವಾಗುತ್ತಿದೆ.

ಸೊಂಪಾದ ಸಂಜೆ, ತಂಗಾಳಿ ಬೀಸುತ್ತಿದೆ. ನಿರ್ಮಲ ವಾತಾವರಣ; ಸ್ವಲ್ಪ ದೂರದಿಂದ ಹಿತಕರವೆನಿಸುವ ಕೊಳಲಿನ ನಾದ ಕೇಳಿ ಬರುತ್ತಿದೆ. ಮಧುರ ಶಬ್ದ; ಜೀವನ ಸುಮಧುರ. ಆದರೆ ಇದು ಎಷ್ಟು ಕಾಲ ?

ದೊಡ್ಡರಸ್ತೆ, ಅಪಾರ ಜನಸಂದಣಿ, ಗಲಿಬಿಲಿ ಶಬ್ದ. ಅಲ್ಲೆ ಒಂದು ಕಡೇ ಅಂಗಡಿಯಿಂದ 'ಸರಿಯಾಗಿ ತೂಕ ಮಾಡಲಿಲ್ಲ' ಎಂಬ ಸಣ್ಣ ಕಾರಣಕ್ಕಾಗಿ ಜಗಳ. ರಸ್ತೆ ನಡುವೆ ಸಣ್ಣ ವಾಹನಗಳಿಂದ ಹಿಡಿದು ದೊಡ್ಡ ವಾಹನಗಳವರೆಗೂ, ಅವುಗಳ ಗುಡುಗುಡು ಶಬ್ದ, ಆಟೋ ರಿಕ್ಷಾದ ಶಬ್ದವಂತೂ ಪ್ರಧಾನ. ಅಬ್ಬಾ! ಕಿವಿ ಚಿಟ್ಟು ಹಿಡಿದು ಹೋಗುತ್ತದೆಯಲ್ಲವೇ ? ಇಂದಿನ ವಿಷಮ ಪರಿಸ್ಥಿತಿಗಳಲ್ಲಿ ದೊಡ್ಡನಗರಗಳು, ತಲೆ ಎತ್ತಿ ನಿಲ್ಲುತ್ತಿರುವ ಸಣ್ಣನಗರಗಳೂ ಅನುಭವಿಸುತ್ತಿರುವ ಒಂದು ಸ್ಥಿತಿ. ಮಲಿನಗಾಳಿ, ಮಲಿನ ನೀರು ಎನ್ನುತ್ತೇವೆ, ಹಾಗೆಯೇ ಮಲಿನ ಶಬ್ದ ಎನ್ನ ಬೇಕಾಗಿದೆ. 'ಶಬ್ದ ಮಾಡಬೇಡಿ' ಎಂಬ ಫಲಕವನ್ನು ಅಲ್ಲಲ್ಲೆ ಹಾಕಬೇಕಾಗಿದೆ. ಮಕ್ಕಳು ಶಾಲೆಯಲ್ಲಿ ಗಲಾಟೆ ಮಾಡುತ್ತಿದ್ದು ಶಬ್ದ ಹೆಚ್ಚಾದರೆ LESS NOISE ಎಂದು ಅವರನ್ನು ಗದರಿಸುತ್ತಾರೆ.

## ಆರೋಗ್ಯಕ್ಕೆ ಮಾರಕ ಅತಿಶಬ್ದ

ವೈದ್ಯ ವಿಜ್ಞಾನ "ಗದ್ದಲದಿಂದಷ್ಟೇ ಕಿವಿಯಷ್ಟೇ ಕೆಡುವುದಿಲ್ಲ, ಹೃದಯ ರೋಗ, ಅತಿರಕ್ತದೊತ್ತಡ, ಹೊಟ್ಟೆಹುಣ್ಣು, ನರದೌರ್ಬಲ್ಯ, ನಿದ್ರೆಇಲ್ಲದಿರುವಿಕೆ, ಮಾನಸಿಕ ರೋಗಗಳೇ ಮೊದಲಾದ ರೋಗಗಳು ಉದ್ಭವಿಸುತ್ತವೆ" ಎಂದು ಹೇಳುತ್ತಿದೆ. ಹೆಚ್ಚು ಜನ ಸೇರಿದ ಕಡೆಗಳಲ್ಲಿ ಉಂಟಾಗುವ ಶಬ್ದ ನಮ್ಮ ಯೋಚನಾಶಕ್ತಿಯನ್ನೇ ಹಾಳುಮಾಡುತ್ತದೆ. ಜೀವನ ಸರಾಗವೆನಿಸದು. ಮಕ್ಕಳು ಅತಿ ಶಬ್ದವಿರುವ ಕಡೆ ಬಾಳಬೇಕಾಗಿ ಬಂದಾಗ ಅವುಗಳ ಬೆಳವಣಿಗೆ ಕುಂಟಿತವಾಗುತ್ತದೆ. ಬಹುಬೇಗ ಅವು ಪೆಚ್ಚಾಗುತ್ತವೆ. ಕಾರ್ಖಾನೆ, ರೈಲ್ವೆನಿಲ್ದಾಣ ಅಂಗಡಿಬೀದಿ ಇಂಥಕಡೆಗಳಿಗೆ ಸಮೀಪದ ವಾಸಿಸುವ ಜನ ಬಹು ಬೇಗ ಹಲವು ಕಾಯಿಲೆಗಳಿಗೆ ತುತ್ತಾಗಿರುವುದನ್ನು ಕಾಣಬಹುದು. ರಾಬರ್ಟ್ ಕೋಚ್ ಎಂಬ ಸಂಶೋಧಕ ತಿಳಿಸಿದಂತೆ "ಕಾಲರಾ ವಿರುದ್ಧ ಹೋರಾಡಿದಂತೆ ಒಂದಲ್ಲ ಒಂದು ದಿನ ಶಬ್ದದ ವಿರುದ್ಧ ಹೋರಾಡಬೇಕಾದೀತು, ಆ ದಿನ ದೂರವೇನಿಲ್ಲ"

ವಿಶ್ವ ಆರೋಗ್ಯ ಸಂಸ್ಥೆಯ ಇತ್ತೀಚಿನ ವರದಿಯಲ್ಲಿ "ಕೇವಲ ಕಾರ್ಖಾನೆಗಳು ಮಾಡುವ ಶಬ್ದ ಒಂದೇ ಸಂಯುಕ್ತ ಸಂಸ್ಥಾನಗಳಲ್ಲಿ ನಾಲ್ಕು ಲಕ್ಷಕೋಟಿ ಡಾಲರ್‌ಗಳ ಹಣದವೆಚ್ಚಕ್ಕೆ ದಾರಿ ಮಾಡಿದೆ" ಎಂದು ಸಾರಿದೆ. ಅಷ್ಟು ಆಕಸ್ಮಿಕಗಳು ಅಲ್ಲಿ ಆಗುತ್ತವೆ.

ಎಲ್ಲೆಲ್ಲೂ ಶಬ್ದ!

ರಾಮ ನವಮಿ, ರಾಜ್ಯೋತ್ಸವ, ಗಣೇಶೋತ್ಸವ ಮೊದಲಾದ ದಿನಗಳಲ್ಲಿ ಧ್ವನಿವರ್ಧಕಗಳ ಹಾವಳಿಯಾದರೆ ಬೇರೆ ದಿನಗಳಲ್ಲಿ ಪಕ್ಕದ ಮನೆಯಲ್ಲಿ ಅವರ ಪ್ರಿಯವಾದ ಪಾಪ್ ಸಂಗೀತದ ಗದ್ದಲವನ್ನು ನಾವು ನಮ್ಮ ಮನೆಯಲ್ಲಿ ಅದೂ ಮಧ್ಯಾಹ್ನ ವಿಶ್ರಾಂತಿ ಪಡೆಯುವ ಕಾಲದಲ್ಲಿ ಕೇಳಬೇಕು. ಈ ಶಬ್ದಕ್ಕೆ ಮಿತಿಯುಂಟೇ? ಬೊಂಬಾಯಿ, ಡೆಲ್ಲಿ, ಕಲ್ಕತ್ತಾ ನಗರಗಳಲ್ಲಿ ದಿನವಿಡೀ ಶಬ್ದ ಸಾಗರದ ಅಲೆಗಳ ಹೊಡೆತವನ್ನು ಜನ ತಡೆದುಕೊಳ್ಳಬೇಕು. ಇತ್ತೀಚೆಗೆ ಬೆಂಗಳೂರಿನ ಜನಗಳೂ ಆ ಶಿಕ್ಷೆಯನ್ನು ಸ್ವಲ್ಪ ರಿಯಾಯಿತಿಯಲ್ಲಿ ಅನುಭವಿಸುತ್ತಿದ್ದಾರೆ. ಧೂಳು, ಧೂಮಗಳ ಜೊತೆಗೆ ಶಬ್ದವೂ ಸೇರಿ ಜೀವನ ದುಸ್ತರವೆನಿಸಿದೆ ಜರ್ಮನಿಯಲ್ಲಿ ವರ್ಷಕ್ಕೊಮ್ಮೆ ಶಬ್ದ ನಕ್ಷೆ ತಯಾರಾಗುತ್ತದೆ. ಆ ನಕ್ಷೆಯಲ್ಲಿ ಸೂಚಿತವಾಗಿರುವ ಪ್ರದೇಶಗಳಲ್ಲಿ ಶಾಲೆ, ಆಸ್ಪತ್ರೆಗಳನ್ನು ಕಟ್ಟುತ್ತಾರೆ. ಇದು ಒಂದು ಒಳ್ಳೆಯ ಯೋಜನೆ.

ಪರಿಹಾರ

ಎಲ್ಲೆಡೆಯೂ ಗದ್ದಲವಿದೆ. ಶಬ್ದ ಮಾಲಿನವಾಗಿದೆ ಕೆಲವರಿಗಂತೂ ಗದ್ದಲವೆಂದರೆ ಬಲು ಪ್ರೀತಿ. ಮಾತನಾಡುವಾಗ ಗಟ್ಟಿಯಾಗಿ ಅರಚಿಕೊಳ್ಳುತ್ತಾರೆ. ಕೆಲವು ವಾಹನಗಳನ್ನು ಬಿಡುವ ರಭಸವೇ ಜೋರು. ಗದ್ದಲದ ವಿರುದ್ಧ ಹೋರಾಡಲು ನಾವು ನಾವೇ ಮುಂದಾಗಬೇಕು.

ನೀವು ಮಲಗುವ ಕೋಣೆ ಗದ್ದಲದಿಂದ ದೂರವಿರುವ ಹಾಗೆ ವ್ಯವಸ್ಥೆ ಮಾಡಿಕೊಳ್ಳಿ. ಕಿವಿಗೆ ಹತ್ತಿ ತುರುಕಬೇಕಷ್ಟೆ! ಕಟ್ಟಡಗಳನ್ನು ಶಬ್ದ ಪ್ರತಿರೋಧಿಯಾಗಿರುವಂತೆ ಕಟ್ಟಬೇಕು. ಬಲವಾದ ಕಾಂಕ್ರೀಟಿನ ಹೊದಿಕೆ ಹಾಕಿದರೆ ಇನ್ನೂ ಅನುಕೂಲ. ನಿಮ್ಮ ಕುಟುಂಬದಲ್ಲಿ ಗದ್ದಲವಿರದಂತೆ ನೋಡಿಕೊಳ್ಳಿ. ಅಣ್ಣನೋ, ತಮ್ಮನೋ, ತಂದೆಯೋ ತಾಯಿಯೋ ಗಟ್ಟಿಯಾಗಿ ಮಾತನಾಡಿದರೆ ಮೆಲ್ಲಗೆ ಮಾತನಾಡಲು ಕೇಳಿಕೊಳ್ಳಿ. ನಿಮ್ಮದೇ ಆದ ವಾಹನವಿದ್ದರೆ ಅದರ ಬಿಡಿ ಭಾಗಗಳ ಕಾರ್ಯವನ್ನು ಪರಿಶೀಲಿಸಿ. ವಾಹನ ಹೆಚ್ಚು ಸದ್ದು ಮಾಡದಂತೆ ನೋಡಿಕೊಳ್ಳಿ. ಸೌಮ್ಯ ಮನೋಭಾವ ನಿಮ್ಮದಾದಾಗ ನೀವೇ ಶಬ್ದ ಮಧುರತೆಯನ್ನನುಭವಿಸುತ್ತೀರಿ. ಪ್ರತಿಕುಟುಂಬ ಎಚ್ಚರ ವಹಿಸಿದಾಗ ಜೀವನವೂ ಗದ್ದಲದಿಂದ ದೂರವಾಗಿಯೇ ಆಗುತ್ತದೆ. ಗದ್ದಲಿಗರ (Noise creators) ಸಂಖ್ಯೆ ಮೊದಲು ಕಡಿಮೆಯಾಗಬೇಕು. ಆಗ ಭಗವಂತನು ದಯಪಾಲಿಸಿರುವ ಕಿವಿ ನಮ್ಮದೇ ಆಗುತ್ತದೆ. ಶಬ್ದಮಲಿನತೆಯೂ ಇಲ್ಲವಾಗುತದೆ.

—

: ನುಡಿ ಮುತ್ತುಗಳು :

ಹೆಂಡ ಮಾರುವ ಹಕ್ಕನ್ನು ಕೊಡುವ ರಹದಾರಿಯನ್ನು ನಿಲ್ಲಿಸುವ ಶಾಸನವು-ಸಮರ್ಥ ಪ್ರಭುತ್ವ, ಜನತೆಯ ಸಾಮಾನ್ಯ ಒಳಿತಿಗಾಗಿ ಮಾಡುವ ವಿಚಾರಬದ್ಧ ಶಾಸನವೆಂದು ನಾನು ಭಾವಿಸುತ್ತೇನೆ.



ನಿಜವಾದ ಧರ್ಮ, ನಿಜವಾದ ನೀತಿ ಒಂದಕ್ಕೊಂದು ಶಬ್ದಾರ್ಥಗಳಂತೆ ಹೆಣೆದುಕೊಂಡಿವೆ. ಧರ್ಮವಲ್ಲದ ನೀತಿ ಬರೀ ಬಯಲು, ಶೂನ್ಯ ಲೋಕ.

-ಗಾಂಧೀಜಿ.

# ದೇವರು ಮತ್ತು ವಿಜ್ಞಾನ

—ಬಿ. ಎಲ್. ಭಟ್

ಈಚೀಚೆಗೆ ಭೌತಿಕ ಅಸ್ತಿತ್ವದಲ್ಲಿ ಮಾತ್ರ ವಿಶ್ವಾಸ ವಿಟ್ಟಿರುವ ಜನತೆ ಕಾಲ್ಪನಿಕ ಶಕ್ತಿಯ ಕಡೆ ನಾಸ್ತಿಕ ಮನೋಭಾವ ತಳೆಯುತ್ತಿರುವುದು ದುರದೃಷ್ಟಕರ ಸಂಗತಿಯಾಗಿದೆ. ವಿಜ್ಞಾನ ರೀತ್ಯ ಪ್ರತ್ಯಕ್ಷವೇ ಪ್ರಮಾಣವಾದರೂ ಅದಕೂ ಒಂದು ಊಹನೆ ಇರಲೇಬೇಕು ಅಂತೆಯೇ ಏನನ್ನೋ ಕುರಿತು ಚಿಂತಿಸುವವನಿಗೆ ಏನೋ ಗೋಚರಿಸುತ್ತದೆ. ಸತ್ಯದ ಸಾಕ್ಷಾತ್ಕಾರ ವಿಚಾರವಾದಿಗಳ ಹಾಗೂ ವಿಜ್ಞಾನಿಗಳ ಏಕಮೇವ ಗುರಿಯಾಗಿದೆ.

"ದೇವರಭಯವೇ ಜ್ಞಾನದ ಆರಂಭ" ಎಂಬುದು ಕನ್ನಡದಲ್ಲಿ ಪ್ರಸಿದ್ಧವಾದ ಗಾದೆಯ ಮಾತು ವೇದಕ್ಕೆ ಸಮ ಎಂಬ ನಾಣ್ಣುಡಿಯಿದೆ. ಈ ಮಾತಿನ ಮುಖ್ಯಾರ್ಥವನ್ನು ಸರಿಯಾಗಿ ಅರಿತರೆ ಇಂದಿನ ವಿಜ್ಞಾನ ಮತ್ತು ದೇವರ ನಡುವಣ ಸಂಬಂಧದ ಯಥಾರ್ಥಜ್ಞಾನ ಉಂಟಾಗುತ್ತದೆ. "ತನ್ನ ತಾನರಿದೊಡೆ ತನ್ನ ಅರಿವೇ ಗುರು" ಎಂಬುದು ಜಗಜ್ಯೋತಿ ಬಸವಣ್ಣನವರ ನುಡಿ ಮುತ್ತು ತನ್ನನ್ನು ತಾನು ತಿಳಿಯಬೇಕಾದರೆ ಜ್ಞಾನದೀಪ ದಾರಿ ತೋರಬೇಕು. ಅದಕ್ಕೆ ದೇವರ ದಯೆ ಬೇಕು. ಇಲ್ಲಿ "ದೇವರ" ಅಸ್ತಿತ್ವದ ಬಗ್ಗೆ ಆಸ್ತಿಕಭಾವನೆಯಿರಬೇಕು. ದೇವರಲ್ಲಿ ನಂಬಿಕೆ ಇರಬೇಕು. ಸಮಾಜ ಜೀವನದಲ್ಲಿ ನಂಬಿಕೆಗೆ ಪ್ರಧಾನ ಸ್ಥಾನ ಮೀಸಲಾಗಿದೆ. ಇಂದಿನ ಹದಗೆಡುತ್ತಿರುವ ಸಾಮಾಜಿಕ ಸ್ಥಿತಿಗತಿಗಳನ್ನು ನೋಡಿದರೆ ಎಲ್ಲೆಲ್ಲೂ ದೇವರ ಬಗ್ಗೆ ಸಂಶಯ ಹೆಚ್ಚುತ್ತಿರುವುದು ತಿಳಿದು ಬರುತ್ತದೆ. "ದೇವರು" ಎಂಬುದಕ್ಕೆ ಉದ್ದ-ಅಗಲಗಳಾಗಲೀ, ಎತ್ತರದಳತೆಯಾಗಲೀ, ತೂಕವಾಗ[ಲೀ] ಇದೆಯೆನ್ನಲಾಗದು. ಇದೊಂದು ಅಣೋರಣೀಯವ[ಾನ್] ಮಹತೋ ಮಹೀಯಯವಾ" ಆದ ಶಕ್ತಿ. ಭೂತಭವಿಷ್ಯ[ದ್]ದ್ವರ್ತಮಾನಗಳಲ್ಲಿ ಪ್ರಕೃತಿಯನ್ನು ಸರಿದೂಗಿಸಿಕೊಂ[ಡು] ಹೋಗಬಲ್ಲ ದಿವ್ಯ ಸನಾತನ ಶಕ್ತಿ. ಇಂತಹ ಶಕ್ತಿಂ[ಯ] ಬಗ್ಗೆ ಸರಿಯಾದ ತಿಳುವಳಿಕೆ ಅಗತ್ಯ. ಪುರಾತನಕಾ[ಲ]ದಿಂದಲೂ ಈ ಬಗೆಗೆ ಅಪಾರ ಜ್ಞಾನವಾಹಿನಿ ಹರಿದಿದೆ.

ಎಲ್ಲಾ ಧರ್ಮಗಳಲ್ಲೂ ದೇವರ ಕುರಿತು ತಿ[ಳು]ವಳಿಕೆಯಿದೆ. ದೇವರೊಬ್ಬನೇ ಆದರೆ ಹೆಸರು ಹಲವು. ಬೇರೆ ಬೇರೆ ಆಕಾರದ ಪಾತ್ರೆಗಳಲ್ಲಿ ನೀರನ್ನು ಹಾಕಿದಾ[ಗ] ನೀರು ಆಯಾ ಪಾತ್ರೆಯ ಆಕಾರವನ್ನು ತಳೆಯುತ್ತದೆ. ಆದರೆ ನೀರು ಒಂದೇ! ಪಾತ್ರೆಗಳ ಆಕಾರಕ್ಕೆ ತಕ್ಕಂತೆ ನೀರಿನ ಆಕಾರ ಬದಲಾಗಿರಬಹುದು. ಭಗವಂತನ ಅಸ್ತಿತ್ವ ಕಲ್ಪನೆಯೂ ಹೀಗೆಯೇ. ಪ್ರಪಂಚದ ಆಗು ಹೋಗುಗಳ ಬಗ್ಗೆ ಪರೋಕ್ಷವಾಗಿ ದೈವಶಕ್ತಿಯ ಕೈವಾಡ ಇದ್ದೇ ಇರುತ್ತದೆ. ಆದರೆ ಇದನ್ನು ಅನೇಕರು ನಂಬಲು ಶಕ್ಯವಿಲ್ಲವಾಗಿದೆ. ಯಾವುದೇ ಕಾರ್ಯ ನಡೆಯಬೇಕಾದರೆ ದೈವಸಹಾಯ ಹಾಗೂ ಮನುಷ್ಯ ಪ್ರಯತ್ನ ಬೇಕೇ ಬೇಕು. ಕೆಲಸ ಮಾಡುವುದು ನಮ್ಮ ಕರ್ತವ್ಯ ಫಲಾ-ಫಲ ದೈವೇಚ್ಛೆ! ಇದು ಅನುಭವ ಸಿದ್ಧ. ನಮ್ಮ ಹಿರಿಯರು ದಾರ್ಶನಿಕರು, ಆಚಾರ್ಯರು ಎಲ್ಲರೂ ಇದನ್ನೇ ಸಾರಿದ್ದಾರೆ. ಪರಸ್ಪರ ಪ್ರೀತಿ-ಶಾಂತಿಗಳೇ ಭಗವಂತನನ್ನು ಸಮೀಪಕ್ಕೆ ತರಬಲ್ಲ ಸಾಧನಗಳು. ಇದನ್ನು ಸಾಧಿಸಬಲ್ಲ ಮಾನವನೇ ದೇವನಾಗಬಲ್ಲನೆಂಬುದು ತ್ರಿಕಾಲಾಬಾಧಿತವಾದ ಸತ್ಯ.

ಪ್ರಾಚೀನ ಋಷಿಗಳ, ದೃಷ್ಟಾರರ "ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ" ಎಂಬ ಉಕ್ತಿ ಪ್ರಚಲಿತ ದಿನಗಳಲ್ಲಿ ವಿಮರ್ಶೆಗೆ ಒಳಗಾಗಿದೆ. ಇತ್ತೀಚೆಗಿನ ದಿನಗಳಲ್ಲಿ ವಸ್ತುವಿನ ಭೌತಿಕ ಅಸ್ತಿತ್ವದಲ್ಲಿ ಅಚಲ ವಿಶ್ವಾಸವಿದೆ ಹೊರತು ಕಾಲ್ಪನಿಕ ಸ್ವರೂಪದಲ್ಲಿ ಇಲ್ಲ. ಜನರಿಗೆ ದೇವರ ಇರುವಿಕೆಯಲ್ಲಿ ಶ್ರದ್ಧೆಯಿಲ್ಲ ಶ್ರದ್ಧಾಳುಗಳು ಹಾಸ್ಯಾಸ್ಪದ ವ್ಯಕ್ತಿಗಳಾಗಿದ್ದಾರೆ. ನೀರಿನಲ್ಲಿ ಕೆಸರಿದೆ. ಆದರೆ ಕೆಸರುಳ್ಳ ನೀರನ್ನು ಕುಡಿದರೆ ಆರೋಗ್ಯ ಹಾಳಾಗುತ್ತದೆ. ಅದರಂತೆ ಸಮಾಜದಲ್ಲಿ

[೨೦ ನೇ ಪುಟನೋಡಿ]

ಕಾವ್ಯವಾಹಿನಿ

## ..........?....ಸ್ತಿಕರು

—ಜಿ. ಪಿ. ದೈವಜ್ಞಾಚಾರ್ಯ

ಮೂಢ ನಂಬಿಕೆಗಿಂಬುಕೊಡದ ಋತುರಾಜನಿಗೆ
ಮೂಢರಿತ್ತಾ ಬಿರುದು ನಾಸ್ತಿಕರು ಎಂದು
ತ್ರಿವಿಧದಲಿ ತಮ್ಮನ್ನೆ ದೇಶಕ್ಕೆ ಮುಡಿಪಿಟ್ಟು
ಜನಸೇವೆಯನು ಗೈದರಾ ದೀನಬಂಧು

"ಜನಸೇವೆ ಜನಾರ್ದನ ಸೇವೆ"ಯೆಂಬಾರ್ಯೋಕ್ತಿ
ಸಾರುತ್ತಿದೆ ಜವಾಹರರಾಸ್ತಿಕರು ಎಂದು
ಶ್ರೀ ರಾಮನಾಮವೇ ಉಸಿರೆಂದ ರಾಷ್ಟ್ರಪಿತ
ಹೆಸರಿಸಿದನಿವರನ್ನು ವರಶಿಷ್ಯನೆಂದು

ತಮ್ಮ ಹುಟ್ಟಿದ ದಿನವ ಸಾರಿದರು ಚಾಚಾಜಿ
ದೇವಸವು ಮಕ್ಕಳ ದಿನಾಚರಣೆಯೆಂದು
ಮಕ್ಕಳೊಲವಿನ ಪೂಜೆ, ಜನಜನಾರ್ಧನ ಸೇವೆ
ಪಂಡಿತರ ಆಸ್ತಿಕತೆಗಿವು ಸಾಕ್ಷಿ ಇಂದು

ಇಂಥ ಆಸ್ತಿಕರ್ನಾಮ ಸ್ಮರಣೆಯ ವಿಧವಿಧದಿ
ಬುವಿ ಪಾಡಿ ತೊಡುತಲಿದೆ ಅವರನ್ನು ಇಂದ
ಇಂತು ಹಲಮುಖದಲ್ಲಿ ದೇವಪ್ರೀತಿಯುಗಳಿಸಿ
ಅವನೆಡೆಗೆ ಸಾಗಿರುವ ಅಮರರೆಂದೆಂದು

ರಾಜಕೀಯ ಸೂತ್ರ; ಕೆಂಗುಲಾಬಿಯ ಛತ್ರ
ಮಕ್ಕಳಾತ್ಮದ ಚಿತ್ರ; ಕೂಗುತಿವೆ ಇಂದು
ಭಾರತಾಂಬೆಯ ಪುತ್ರ, ವಿಶ್ವಶಾಂತಿಯ ಮಂತ್ರ
ಆಸ್ತಿಕನ ನಿಜಪಾತ್ರ ಅವನರಿಸಲೆಂದು.



## ಹೆಜ್ಜೆಗಳು

—ದೊಡ್ಡಬಾಣಗೆರೆ ಪ್ರಕಾಶಮೂರ್ತಿ

ನೀರೆಂಬುವೇರಿತನದ
ಇಳುವರಿ ಹೆಚ್ಚಿ
ಪ್ರಮಾಣಿಕತೆಯ ನಡತೆಗಳು
ಒದ್ದುಕೊಳ್ಳುತ್ತಿವೆ
ವರ್ತನೆಗಳು ದಾರಿತಪ್ಪಿ
ಬವಣೆಗಳ ಬವಣೆಗೆ
ಹುಲ್ಲುಕಡ್ಡಿಯಾಗಿ
ಬೀಳುತ್ತಿವೆ.

ಸಂಸ್ಕೃತಿ
ಸಂಪನ್ನತೆ
ಸದಾಚಾರ
–ಇವುಗಳೆಲ್ಲಾ
ಕಾಪಿ ಪುಸ್ತಕದ
ವೆದದಲ ಸಾಲಿನ
ಅಕ್ಷರಗಳಂತೆ
ಮಾತಿನ ಮಾಲೆಯಲ್ಲಿ
ಬೆಳಗುತ್ತಿವೆ.

(18ನೇ ಪುಟದಿಂದ)
ಆರೋಗ್ಯಮಯ ವಾತಾವರಣವಿರಬೇಕಾದರೆ ಇಂತಹ ದೈವೀಶಕ್ತಿಗಳಿಗೆ ಶರಣು ಹೋಗಲೇ ಬೇಕು. ಅಂದರೆ ಸೋಮಾರಿಯಾಗಿದ್ದು, ಎಲ್ಲದಕ್ಕೂ ದೇವರೇ ಗತಿ ಎನ್ನುವ ಹೇಡಿತನವನ್ನು ಮೈಗೂಡಿಸಿಕೊಳ್ಳುವುದು ಸರ್ವಥಾ ಯೋಗ್ಯವಾದುದಲ್ಲ.

ಒಂದು ಕಾಲದಲ್ಲಿ ಜ್ಞಾನಮಯ ಶರೀರಯಾಗಿದ್ದು, ಸಕಲವನ್ನು ತನ್ನ ಚಿಂತನೆ ಯಿಂದಲೇ ಹಸ್ತಗತ ಮಾಡಿಕೊಳ್ಳ ಬಲ್ಲ ಮಾನವ ಇಂದಿನ ವಿಜ್ಞಾನ ಯುಗದಲ್ಲಿ ಕರ್ಮಮಯವಾದ ಪ್ರಯೋಗಳಿಂದ ವಸ್ತುವಿನ ಸ್ವರೂಪ ದರ್ಶನ ಮಾಡಿಕೊಳ್ಳುತ್ತಿದ್ದಾರೆ. ಕೆಲವರಿಗೆ ಪ್ರತ್ಯಕ್ಷವೇ ಪ್ರಮಾಣ. ಪ್ರತ್ಯಕ್ಷಕ್ಕೂ ಮೊದಲು ಊಹೆಯಿರುತ್ತದೆ. ಏನನ್ನೋ ಚಿಂತಿಸುತ್ತಿರುವವನಿಗೆ ಏನೋ ಗೋಚರಿಸುತ್ತದೆ. ವಿಜ್ಞಾನವೂ ಪರಿಣಾಮದಲ್ಲಿ ಸತ್ಯದ ಸಾಕ್ಷಾತ್ಕಾರ ಮಾಡುವ ಕಲ್ಪನೆಗೆ ಸ್ಥಾನಕೊಟ್ಟಂತಾಗುತ್ತದೆ.

ಈಗ ವಿಜ್ಞಾನ ತುಂಬ ಮುಂದುವರಿದಿದೆ ವಿಶೇಷವಾದ ಜ್ಞಾನವೇ ವಿಜ್ಞಾನ! ಒಂದು ವಸ್ತು ಅಥವ ಸಂಗತಿಯ ಬಗೆಗೆ ಹೆಚ್ಚಿನ ಮಾಹಿತಿಯನ್ನು ಕಂಡ ಹಿಡಿಯುವುದು ವಿಜ್ಞಾನ. ಇದು ಸದಾಕಾಲದ ಸತ್ಯವಾದುದರ ಸಂಶೋಧನೆ. ಪ್ರಕೃತಿಯಲ್ಲಿರುವ ಮೂಲಭೂತ ವಸ್ತುಗಳ ಶೋಧನೆಗೆ ಸಾಧನ ಅಷ್ಟೇ! ಮನುಷ್ಯನ ಬುದ್ಧಿಗೆ ನಿಲುಕದ ವಿಷಯಗಳ ಅರಿವು ಅಸಾಧ್ಯ. ಇನ್ನೂ ಅಪರಿಚಿತವೆನಿಸಿರುವ ವಿಚಾರಗಳು ಅಪಾರವಾಗಿವೆ ವಿಜ್ಞಾನದಲ್ಲಿ ಸಂಶೋಧನೆ-ಪ್ರಯೋಗಗಳೇ ಮುಖ್ಯ. ಆದರೆ ಎಲ್ಲದಕ್ಕೂ ಒಂದು ಮಿತಿಯಿದೆ. ವಿಜ್ಞಾನವು ಸೃಷ್ಟಿಯನ್ನು ಮಾಡಿದೆ. ಅಣುಶಕ್ತಿಯಿಂದ ಕೃತಕವಾಗಿ ಮಳೆ ಬರಿಸುತ್ತಾರೆ. ಬಾಹ್ಯಾಕಾಶದಲ್ಲಿ ವಿಹರಿಸುತ್ತಾರೆ. ಹೇಗೆ ಹಲವಾರು ಕನಸಿನಲ್ಲೂ ಕಾಣಲಾಗದ ಕಲ್ಪನೆಗಳಿಗೆ ವಿಜ್ಞಾನ ಮೂರ್ತಸ್ವರೂಪ ನೀಡಿದೆ. ಆದರೆ ಇವಕ್ಕೆಲ್ಲ ಮಿತಿಯಿದೆ. ಕಾಲಾವಧಿಯಿದೆ. ದೈವಸೃಷ್ಟಿಗೆ ಅದಿಲ್ಲ. ಹೂವಿಗೆ ಬಣ್ಣವಿದೆ. ಏಕೆ ಎಂಬುದರ ಸಂಶೋಧನೆ ನಡೆದಿದೆ. ನಡೆತಯುಲಿದೆ. ಹಕ್ಕಿಗೆ ಇಂಚರವಿದೆ. ಕಾಮನಬಿಲ್ಲು ಆಕರ್ಷಕವಾಗಿದೆ. ಇವುಗಳಿಗೆಲ್ಲ ಕಾರಣ ಕಂಡುಹಿಡಿಯುವುದು ಸಾಧ್ಯ ಇವುಗಳಿಗೆಲ್ಲ ಅಪವಾದವಾಗಿ ಸರ್ವದಾ ಸತ್ಯ, ಶಿವ, ಸುಂದರವಾದ ನಿಸರ್ಗ ಸುಮಧುರ ಸೃಷ್ಟಿ ಮಾನವನ ಬುದ್ಧಿಗಿಂತ ತುಂ ಅತೀತವಾದದ್ದು!

ಆಧುನಿಕ ವಿಜ್ಞಾನ ಭೂಮಿಯಿಂದ ಆಕಾಶದ ಕಡೆಗೆ ಸಾಗಿದೆ. ಅಂತರಿಕ್ಷದ ಗ್ರಹಗಳ ಪರಿಶೀಲನೆ ತೊಡಗಿದೆ. ಇದು ದೈವ ದೃಷ್ಟಿಯಲ್ಲಿ ಬಂದ ಮಾನವ ಜ್ಞಾನಕ್ಕೆ ನಿಜವಾದ ಸವಾಲೇ ಸರಿ! ವಿಜ್ಞಾನಿಗ ಯಥಾರ್ಥ ಸತ್ಯ ದಆರಾಧಕರೇವಿನಾ ನಾಸ್ತಿಕರ ಅವರ ನಿರ್ಧಾರದ ಮರೆಯಲ್ಲೂ ಎಲ್ಲೋ ಒಂದೆಡೆ ಶ ದಿಂದ ವರ್ಣಿಸಲಾಗದ, ರೂಪರಸಗಂಧ ಸ್ಪರ್ಶಾದಿಗಳಿ ಅಗೋಚರವಾದ, ಯಾವ ಕಲ್ಪನೆಗೂ ನಿಲುಕದ ಒಂದು ಅಲೌಕಿಕ ಶಕ್ತಿ, ಅಸಾಧಾರಣ ಚೇತನ, ಪಡಿಮೂಡು ತ್ತದೆ. ವಿಜ್ಞಾನಿಗಳಾದರೂ ಅವರು ಮನುಷ್ಯರಲ್ಲವೇ

ನಾವು ತಿಳಿದಂತೆ 'NASA'ದ ಅಧಿಕಾರಿಗಳ ಚಂದ್ರನಲ್ಲಿಗೆ ಕಳುಹಿಸಲ್ಪಟ್ಟ ಮೂವರು ಗಗನಯಾತ್ರಿ ಗಳು ಅಪಘಾತಕ್ಕೆ ಸಿಕ್ಕಿದಾಗ ಎಲ್ಲೆಲ್ಲೂ ಅವರ ಸುರ ಗಾಗಿ ಪ್ರಾರ್ಥನೆ ಸಲ್ಲಿಸುವಂತೆ ಏಕೆ ಕೋರಿದರು ವೈದ್ಯರ 'ದೇವರ ಮೇಲೆ ಭಾರ ಹಾಕಿ' ಎಂದೇಕೆ ಹೇಳ ತ್ತಾರೆ? ವಿದ್ಯಾಭ್ಯಾಸದ ಆರಂಭದಲ್ಲಿ ಇನ್ನೂ ಅನೇಕ 'ಶ್ರೀ' ಎಂದೇಕೆ ಆರಂಭಿಸುತ್ತಾರೆ. ಮೊನ್ನೆ ಮೊನ್ನೆ ರಾಜ್ಯ ದಲ್ಲಿ ಮಳೆಯ ಅಭಾವ ತಲೆದೋರಿದಾಗ ಎಲ್ಲಾ ದೇವ ಸ್ಥಾನಗಳಲ್ಲಿ ವಿಶೇಷ ಪೂಜೆಗಳೂ, ಪ್ರಾರ್ಥನೆಗಳೂ ಏಕ ಸಲ್ಲಿಸಲ್ಪಟ್ಟವು? ಇಂತಹ ನೂರಾರು ದೃಷ್ಟಾಂತಗಳನ್ನು ಪರಿಶೀಲಿಸಿದಾಗ ಭಗವಂತನ ಕೃಪಾದೃಷ್ಟಿಯ ಆಶ್ರಯ ದಿಂದಲೇ ನಮ್ಮೆಲ್ಲರ ಶ್ರೇಯಸ್ಸು ಇದೆಯೆಂಬ ಯಥಾರ್ಥ ಸತ್ಯ ಗೋಚರಿಸುತ್ತದೆ.

ಇಷ್ಟಾದರು ಮನುಷ್ಯನು ತನ್ನ ದುರಹಂಕಾರ ವನ್ನು, ರಾಜಸ ಪ್ರವೃತ್ತಿಯನ್ನೂ ಬಿಡಲೊಲ್ಲ ಅದರಿಂದ 'ನಾನು' ಎಂಬ ಗರ್ವ ಅವನಲ್ಲಿ ತಲೆದೋರಿ ಕೆಲವೊಮ್ಮೆ ಅವನನ್ನು ಅವನತಿಯ ಅಧಃಪತನಕ್ಕೆ ಒಯ್ಯುತ್ತದೆ. ಇಂತಹ ವಿಚಾರಗಳನ್ನು ಸರಿಯಾದ ತಿಳುವಳಿಕೆಯ ಮೂಲಕ ಬುದ್ಧಿಗಮ್ಯವನ್ನಾಗಿ ಮಾಡಿಕೊಂಡರೆ ಭೂಮಿ ಯೇ ನಂದನ ವನವಾಗುತ್ತದೆ. ದೇವರು ಮತ್ತು ವಿಜ್ಞಾನ ಗಳೆರಡೂ ಸಮಾಜದ ಜನತೆಯ ಸುಖ ಶಾಂತಿಗಳ

[26 ನೇ ಪುಟ ನೋಡಿ]

# ಕವಿ, ದರ್ಶನ ಮತ್ತು ಕಾವ್ಯ

—ಡಿ॥ ಟಿ. ಎನ್. ಮಹದೇವಯ್ಯ

ಭಾವನಾ ಪ್ರಧಾನವಾದ ಸೃಷ್ಟಿಯಲ್ಲಿ ಸೌಂದರ್ಯದ ಅನುಭವವು ಭಾವನೆಯ ಪ್ರಗತಿಯಲ್ಲಿ ಕಂಡು ಬರುವ ಒಂದು ಮೆಟ್ಟಲು ಮಾತ್ರ. ಇದರ ಸೂಕ್ಷ್ಮಸ್ಥಿತಿಯ ಅನುಭವವು ಮಾತಿಗೆ ನಿಲುಕುವಂತಹುದಲ್ಲ. ಕವಿಯು ಸೃಷ್ಟಿಯಲ್ಲಿ ಕಂಡು ಅನುಭವಿಸುವ ದಿವ್ಯ ದೃಷ್ಟಿಯೇ ದರ್ಶನ

**ದರ್ಶನ :**

ಸುತ್ತಣ ಪ್ರಕೃತಿಯಲ್ಲಿ ಕಂಡು ಬರುವ ಗಿಡ, ಮರ, ಹೂ, ಬಳ್ಳಿ, ಚಿಗುರು, ಸಂಜೆ, ಇರುಳು, ಬೆಳದಿಂಗಳು, ಮುಂಬೆಳಗು, ಹರಿವ ತೊರೆ, ಉಲಿವ ಹಕ್ಕಿ, ನುಡಿವ ಶುಕ, ಮಂಜು ಹನಿ ಇತ್ಯಾದಿ ಅನೇಕ ರೀತಿಯ ಅನೇಕ ಜಾತಿಯ ವಸ್ತು ವಿಶೇಷಗಳು ಭಾವುಕನಾಗಿ ನೋಡುವ ರಸಿಕ ಹೃದಯದ ಮನಸ್ಸಿಗೆ ಅವು ತಮ್ಮ ಸ್ವಂತ ವ್ಯಕ್ತಿತ್ವದಿಂದಾಚೆಗಿರುವ ಅಮೂಲ್ಯ, ಅನಿರ್ವಚನೀಯ ಸೌಂದರ್ಯವೊಂದರ ಅನುಭವವನ್ನು ಕೆಲವು ಸಮಯ ಸಂದರ್ಭಗಳಲ್ಲಿ ಮಾತ್ರ ತೋರಿ ಕೊಡುತ್ತವೆ. ಇದು ಎಲ್ಲರ ಪಾಲಿಗೆ ಬಂದ ಅನುಭವವಲ್ಲ. ಅದು ಸೃಷ್ಟಿಯ ಅಸದೃಶ ಅನುಗ್ರಹ ಮಾತ್ರ ! ಎಲೆಯೊಂದು ಆತನ ಕಣ್ಣಿಗೆ ಬರಿ ಎಲೆಯಂತೆ ತೋರದು! ಹೂವು ಬರಿ ಬಣ್ಣ ಮತ್ತು ದಳಗಳ ಕಟ್ಟಡವಲ್ಲ. ಎಲೆಯ ಪ್ರತಿ ಮೂಲೆಯೂ ದಳದ ಪ್ರತಿ ಭಾಗವೂ ಒಂದು ಅಸದೃಶ, ಅನುಪಮ ಅತಿಶಯ ಶಕ್ತಿಯ ರಾಗರಂಜಿತ ಸೌಂದರ್ಯವನ್ನು ಸೂಸಿ ನರ್ತಿಸುವ ನವಿಲಾಟವನ್ನು ರಸಿಕನ ಮನಸ್ಸಿಗೆ ತಂದು ಕೊಡುವುವು. ಅದನ್ನು ವೇದಾಂತಿಗಳು 'ಸತ್' ಎಂದೂ ಪೌರಾಣಿಕರು, ಪರಮಾತ್ಮನೆಂದೂ, ದಾರ್ಶನಿಕರು 'ಪುರುಷ' ನೆಂದೂ ಸಂಬೋಧಿಸುವರು. 'ಏಕಂ ಸದ್ವಿಪ್ರಾಬಹುಧಾವದಂತಿ' ಎನ್ನುವುದೇ ಇದು. ಶ್ರುತಿ ಸ್ಮೃತಿಗಳ ಮುಕ್ಕಾಲು ವರ್ಣನೆಯೆಲ್ಲವೂ ಇದಕ್ಕೆ ಮೀಸಲಾಗಿಡಲ್ಪಟ್ಟಿವೆ! ಇದನ್ನೇ ಕವಿಗಳು 'ಸಚೇತನ ಸೌಂದರ್ಯ' ವೆಂದು ಸ್ಥೂಲವಾಗಿ ಕರೆಯುವರು. ಅಷ್ಟು ಮಾತ್ರಕ್ಕೆ ಇನ್ನೊಂದು ಅಚೇತನ ಸೌಂದರ್ಯ ಅಥವಾ ಜಡ ಸೌಂದರ್ಯವಿದೆಯೆಂದು ಯಾರೂ ಭಾವಿಸಲಾಗದು ಏಕೆಂದರೆ ಭಾವನಾ ಪ್ರಧಾನವಾದ ಸೃಷ್ಟಿಯಲ್ಲಿ ಸೌಂದರ್ಯದ ಅನುಭವವು 'ಭಾವನೆಯ' ಪ್ರಗತಿಯಲ್ಲಿ ಕಂಡು ಬರುವ ಒಂದು ಮೆಟ್ಟಲು ಮಾತ್ರ. ಇದರ ಸೂಕ್ಷ್ಮ ಸ್ಥಿತಿಯ ಅನುಭವವು ಮಾತಿಗೆ ನಿಲುಕುವಂತಹುದಲ್ಲ. ಅದರ ವರ್ಣನೆ ತುಂಬಾ ಕ್ಲಿಷ್ಟವೂ, ಗಹನವೂ ಆದದ್ದಾಗುತ್ತದೆಂದು ನಾಮ ನಿರ್ದೇಶದಿಂದ ಸಂಬೋಧಿಸಿ ಅದನ್ನು ಕಂಡುಂಡ ರಸಿಕನ ಯೋಗ್ಯತಾ ಯೋಗ್ಯತೆಗಳನ್ನು ತೋರಿಸಿಕೊಂಡು ಸ್ಪರ್ಶವೇದಿಯಂತಹ ಒರೆಗಲ್ಲಾಗುತ್ತದೆ. ಆದದರಿಂದ ಈ "ಕುರುಹು" ತೋರಿ ವಸ್ತುವು ಅವನಲ್ಲಿ 'ಅರುಹ'ನ್ನು ಹುಟ್ಟಿಸುತ್ತದೆ ಅಥವಾ ಕವಿ ಹೃದಯಕ್ಕೆ ಇದು ಸಚೇತನ ಸೌಂದರ್ಯವೆಂದು ಆರಂಭದಲ್ಲಿ ತೋರಿಬರುತ್ತದೆ. ಇದು ಕವಿ ರನ್ನನಿಗೆ ಕಂಡದ್ದು, ಶೆಲ್ಲಿ (Snelly) ಯ ಮನಸ್ಸನ್ನು ಮಿಡಿದು ಹಾಡಿಸಿದ್ದು, ಹೋಮರನ 'ಇಲಿಯಡ್' ರಚಿಸಿದ್ದು, ಉಮರನ "ರೂಬಿಯಾತ್" ಬರೆಯಿಸಿದ್ದು. ಈ ಸೌಂದರ್ಯ ವಿಶೇಷವೇ ಎಲ್ಲ ವಿಧವಾದ ಕಲಾ ಕೌಶಲ್ಯತೆಯ ತಿರುಳೂ ಆಗಿದೆ. ಆದರೆ ಈ ವಿಚಾರಗಳನ್ನು ಚರ್ಚಿಸಲು ಇಲ್ಲಿ ಅವಕಾಶವಿಲ್ಲ. ದಿವ್ಯ ದರ್ಶನದ ಕುರುಹಲ್ಲಿ ಇದೆ. ಒಟ್ಟಾಗಿ ಹೇಳುವುದಾದರೆ ವೇದೋಪನಿಷತ್ತುಗಳನ್ನು ನಿರ್ಮಿಸಿದ ಅಪೌರುಷೇಯವನ್ನು ಪೌರುಷೇಯವೆಂದು ಕರೆದದ್ದಾಕ್ಕಾಗಿ ಕ್ಷಮೆಯಿರಲಿ- ಬೇರೆ ಕಡೆ ಈ ವಿಚಾರವನ್ನು ಪರಿಶೀಲಿಸಬಹುದು. ಮಹರ್ಷಿಗಳಿಂದ ಹಿಡಿದು ಇಲ್ಲ ಕವಿಗಳನ್ನೊಳಗೊಂಡಂತೆ ಎಲ್ಲ ರಸ ಋಷಿಗಳ ಮನೋಮಂದಿರದ ಬೃಹದಾಕಾಶದಲ್ಲೂ ಮಿಂಚಿ ಮೆರೆದ ರಸಜ್ಯೋತಿ ಇದೇ ಆಗಿದೆ. ಆದುದರಿಂದಲೇ ಮಂತ್ರದ್ರಷ್ಟಾರರಾದ ರಸಋಷಿಗಳು ಅದನ್ನು "ರಸೋ ವೈಸಃ" ಎಂದು ಹಾಡಿದರು.

**ಕವಿ :**

ಇಂತಹ ಸೌಂದರ್ಯದ ಅನುಭವವನ್ನು ತಾನು ಅನುಭವಿಸಿ ಅದನ್ನು ತಾನು ಅನುಭವಿಸಿದಂತೆಯೇ ಬಣ್ಣಿಸಿ ತಾನೂ ಆನಂದವನ್ನು ಹೊಂದಿ ಅದರಲ್ಲಿ ಇತರರನ್ನೂ ಸಹಭಾಗಿಗಳನ್ನಾಗಿ ಮಾಡಬಲ್ಲವನೇ "ಕವಿ". "ಸಚ್ಚಿದಾನಂದ" ವೆಂಬುದರ ರೂಪನಿಷ್ಪತ್ತಿ ಕ್ರಮವನ್ನು ಇಲ್ಲು ಕವಿಯ ದರ್ಶನಾನಂದಗಳಿಗೂ ಸಮನ್ವಯ ಮಾಡಬಹುದು. ಇದೇ ಎಲ್ಲ ಅನಂತಕೋಟಿ ಜೀವರಾಶಿಗಳು ತೊಡಗಿರುವ ಮಹಾಕಾವ್ಯದ ಅನಂತ ಯಾತ್ರೆಯ ಗುರಿ. ಪುಸ್ತಕ ಬರೆಯುವವರೆಲ್ಲರೂ ಕವಿಗಳೆಂದು ಹೇಳಲಾಗದು. ನೂರು ಗ್ರಂಥಗಳನ್ನು ಬರೆದಾಗಲೀ ಅಷ್ಟಾಂಶ ಪುರಾಣಗಳನ್ನು ರಚಿಸಿಯಾಗಿಯಾಗಲೀ ಹದಿನೆಂಟು ರೀತಿಯ ವರ್ಣನೆಗಳನ್ನು ತುಂಬಿ ದಪ್ಪ ದಪ್ಪ ಕಾವ್ಯಗಳನ್ನು ಓಲಿಗರಿ ಗ್ರಂಥಗಳನ್ನು ಕೂಡಿಸುವುದರಿಂದಾಗಲೀ ಯಾವಾತನೂ "ಕವಿತಾ ಶ್ರೀ" ಯ ಹೂಮಾಲೆಯ ವಿಜಯವನ್ನು ಹೊಂದಲಾರನು

ಕಲಾ ಸರಸ್ವತಿಯ ಅನುಗ್ರಹವು ಅಷ್ಟು ದೊರಕುವುದಿಲ್ಲ. ಕವಿತ್ವದ ಮೇರೆ ಇಷ್ಟು ಸಾಮಾನ್ಯವು ಸ್ಥೂಲವೂ ಆದ ಸೀಮೆಯನ್ನು ಹೊಂದಿಲ್ಲ. ಇದೊಂದು ಅಪರೂಪ, ಅಲಭ್ಯ ಅನುಗ್ರಹ ಮಾತ್ರ! ಒಂದೊಂದು ತಲೆ ಮಾರಿನಲ್ಲೂ ಒಬ್ಬೊಬ್ಬ ಕವಿಯಾದರೂ ಜನಿಸುವನೋ ಇಲ್ಲವೋ ಹೇಳಲಾಗುವುದಿಲ್ಲ ಶತಮಾನಕ್ಕೆ ಒಬ್ಬನಾದರೂ ಜನಿಸಬಹುದು. ಆತನು ಬರೆಯುವುದೆಲ್ಲ ಆತ್ಮ ಸಿದ್ಧಿಯ ಮೂಲಕ ಸಂಪಾದಿಸಿದ ಮಂತ್ರ ವಾಕ್ಯ. ಅದಕ್ಕಾಗಿಯೇ 'ನಾನೃಷಿಕುರುತೇಕಾವ್ಯಂ' ಎಂದಿರುವುದು. ಗಮಗಿನ ಭಾರತದಲ್ಲಿ ಒಸರುವ ರಸಾನುಭವವನ್ನಾಗಲಿ, ಹರಿಹರನ ಕಾವ್ಯದ ಭಕ್ತರ ಬದುಕಿನ ಸೌಂದರ್ಯದ ಆವೇಶವನ್ನಾಗಲಿ, ಕಾಳಿದಾಸನ ಶಾಕುಂತಳೆಯ ಆದರ್ಶ ಪ್ರೇಮಾನುಭವವನ್ನಾಗಲಿ, ಕವಿ ರವೀಂದ್ರರ ಗೀತಾಂಜಲಿಯ 'ದರ್ಶನವನ್ನಾಗಲಿ' ನಾವು ಎಲ್ಲ ಕಾಲದಲ್ಲೂ ಪಡೆಯಲು ಸಾಧ್ಯವಿಲ್ಲ. ಜನಾಂಗದ ಅದೃಷ್ಟವಿದ್ದಂತೆ ಒಂದೊಂದು ಯುಗದಲ್ಲಿ ಒಬ್ಬ ವ್ಯಾಸನೋ ಇಲ್ಲವೇ ಒಬ್ಬ ವಾಲ್ಮೀಕಿಯೋ ಒಬ್ಬಕವಿ ರವೀಂದ್ರರೋ ಜನಿಸಬಹುದು.

ಈ ರೀತಿ ಕವಿಯು ಸೃಷ್ಟಿಯಲ್ಲಿ ಕಂಡು ಅನುಭವಿಸಿದ ದಿವ್ಯ ದೃಷ್ಟಿಯೇ "ದರ್ಶನ" ವೆಂದು ಸಾಹಿತ್ಯದಲ್ಲಿ ಕರೆಯಲ್ಪಟ್ಟಿದೆ ಸ್ಥಳಾವಕಾಶವಿಲ್ಲವಾಗಿ ಈ ಸೂತ್ರವನ್ನು ಹೊರತು ಹೆಚ್ಚು ವಿವರಗಳನ್ನು ಕೊಡಲು ಇಲ್ಲಿ ಸಾಧ್ಯವಿಲ್ಲ.

**ಕಾವ್ಯ :**

ಕವಿಯು 'ದರ್ಶನ'ದ ಮೂಲಕಸಾಧಿಸಿದ್ದನ್ನು 'ಒಳ ಹೊರಗಿನ ಜಗತ್ತಿಗೆ' ಸಂಬಂಧಿಸಿದಂತೆ, ಜನಾಂಗದ ಸಂಸ್ಕೃತಿಯ ಮಟ್ಟವನ್ನು ಅನುಸರಿಸಿ ರಸವೇಶದಿಂದ ನುಡಿಯತಕ್ಕದ್ದೇ ಕಾವ್ಯ. ಒಂದು ತಲೆಮಾರಿನ ಜೀವನದ ಅಥವಾ ಬದುಕಿನ ಒಳಗುಟ್ಟಿನ ಮಟ್ಟವನ್ನು ಈ ಕಾವ್ಯವು ತಿಳಿಸುತ್ತದೆ. ಸಂಸ್ಕೃತಿಯ ಉದ್ಧಾರ ಅವನತಿಗಳ ಸುಳುಹನ್ನು ಜಗತ್ತಿಗೆ ತೋರಿಸುತ್ತದೆ ಈ ಕಾವ್ಯ. ಕಾವ್ಯದಿಂದ ಜನಾಂಗವ ಮತ್ತು ಸಂಸ್ಕೃತಿಯ ಉದ್ಧಾರವಾಗುತ್ತದೆ ಸಿಂಹಾಸನಗಳೇಳುತ್ತವೆ, ಬೀಳುತ್ತವೆ, ಒಟ್ಟು ಜಗತಿನ ಸುಖದುಃಖ, ಸಾವು ನೋವು ಏರಿಳಿತಗಳು, ಆಗುಹೋಗುಗಳು ಆಕಾಲದ ಮಹಾಕವಿಯ ಕಾವ್ಯವನ್ನು ಅವಲಂಬಿಸಿರುತ್ತದೆ. 'ವಾಕ್ಯಂ ರಸಾತ್ಮಕಂ ಕಾವ್ಯಂ' 'ನಿಯತಿ ಕೃತಿ ನಿಯಮ ರಹಿತಾಂ ಹ್ಲಾದೈಕ ಮಹೀಂ ಅನನ್ಯ ಪರತಂತ್ರಾಂ ಕಾವ್ಯಂ' ಇತ್ಯಾದಿ ಲಾಕ್ಷಣಿಕರ ಕಾವ್ಯಲಕ್ಷಣಗಳನ್ನು ಇಲ್ಲಿ ಚರ್ಚಿಸಲು ಸ್ಥಳಾವಕಾಶವಿಲ್ಲದೆ ಲೇಖನವನ್ನು ಮುಗಿಸಲಾಗಿದೆ.



## ಶ್ರದ್ಧಾಂಜಲಿ

ರೋಣ ತಾಲ್ಲೂಕು ಹಾಲಕೇರಿಯ **"ಶ್ರೀ ಅನ್ನದಾನ ಮಹಾ ಸ್ವಾಮೀಜಿಯವರು"** ಆಗಸ್ಟು 19 ಶುಕ್ರವಾರದಂದು ಶಿವೈಕ್ಯರಾದರು. ಸ್ವಾಮೀಜಿಯವರು ಧಾರ್ಮಿಕ ಶೈಕ್ಷಣಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಗಣನೀಯ ಸೇವೆಸಲ್ಲಿಸಿದ್ದರು. ಶಿವಯೋಗ ಮಂದಿರದ ಸದಸ್ಯರಾಗಿದ್ದ ಸ್ವಾಮೀಜಿಯವರು ಅದರ ಅಭಿವೃದ್ಧಿಗೂ ಬಹುವಾಗಿ ಶ್ರಮಿಸಿದ್ದರು. ಲಿಂಗೈಕ್ಯ ಶ್ರೀ ಸ್ವಾಮೀಜಿಯವರಿಗೆ "ಸಿದ್ಧಗಂಗಾ" ಮಾಸ ಪತ್ರಿಕೆಯು ಶ್ರದ್ಧಾಂಜಲಿಯನ್ನರ್ಪಿಸುತ್ತದೆ

# ಬೆಂಗಳೂರಿನ ಬಸವ ಮಂಟಪದಲ್ಲಿ

## ವಿ ಚಾ ರ ಗೋ ಷ್ಠಿ

—ಶಿವಲಿಂಗ ದೇವರು.

ವಿಶ್ವಕಲ್ಯಾಣ ಮಿಷನ್ ಆಶ್ರಯದಲ್ಲಿ ಜರುಗಿದ ಬಸವತತ್ತ್ವ ವಿಚಾರ ಗೋಷ್ಠಿಯು ಶರಣ ಸಂಪ್ರದಾಯದ ಒಂದು ಮಹತ್ವ ಹೆಜ್ಜೆ. ಆಧುನಿಕ ಮಾನವ ಜನಾಂಗದ ಅಗತ್ಯಕ್ಕೆ ತಕ್ಕಂತೆ ಬಸವತತ್ತ್ವದ ಸರಳೀಕರಣ ಬಸವತತ್ತ್ವಕ್ಕೆ ದುಡಿಯುವ ಸಂಕಲ್ಪ ಇವುಗಳು ಇವರ ಕ್ರಾಂತಿಕಾರಕ ವಿಚಾರಧಾರೆ.

ಶ್ರಾವಣ ಶುದ್ಧ ಪ್ರತಿಪದೆ, ಬಸವ ಧರ್ಮದ ಇತಿಹಾಸದಲ್ಲಿ ವಿಶಿಷ್ಟ ದಿನ. ಕಾಲಜ್ಞಾನದ ಆಧಾರ ಹಿಡಿದು ಬಸವಣ್ಣನವರ ಚರಿತ್ರೆ ನಿರೂಪಿಸುವ ಶರಣ ರಾಮನಗೌಡ ಪಾಟೀಲರ ಪ್ರಕಾರ ಇದು ಬಸವಣ್ಣನವರು ಕಲ್ಯಾಣದಿಂದ ಗಡಿಪಾರು ಆದ ದಿನ ವಿಶ್ವಗುರು ಬಸವಣ್ಣನವರು ಮಾನವ ಸ್ವಾತಂತ್ರ್ಯವನ್ನು ಸಾರುವ ಸಾರ್ವಕಾಲಿಕ ಸಂದೇಶಗಳ ತೇರನ್ನೆಳೆದು, ವರ್ಣಾಂತರ ವಿವಾಹದ ಆರೋಪ ಹೊತ್ತು, ಸಂಪ್ರದಾಯವಾದಿಗಳ ಸಂಕುಚಿತ ದೃಷ್ಟಿಯ ಪರಿಣಾಮವಾಗಿ, ಕಲ್ಯಾಣನಾಡನ್ನು ತೊರೆದ ದಿನ. ವಿದ್ವಾಂಸರಾದ ಬಾಡಾಲ ರಾಮಯ್ಯನವರ ಗುಣಿತದ ಪ್ರಕಾರ ಬಸವಣ್ಣನವರು ಪರಮಾತ್ಮನಲ್ಲಿ ಒಡವೆರೆದು ಒಂದಾದ ದಿನ. ಎಲ್ಲರ ದೃಷ್ಟಿಯಿಂದಲೂ ಮಹತ್ವವನ್ನು ಪಡೆದ ಈ ಶ್ರಾವಣ ಶುದ್ಧ ಪ್ರತಿಪದೆಯಂದು ನಡುದಾರಿಯಲ್ಲಿ ನಿಂತ ಬಸವತತ್ತ್ವದ ತೇರನ್ನು ಮುಂದಕ್ಕೆಳೆಯುವ ಸಂಕಲ್ಪ ಹೊತ್ತ ಮಹಾದಿನ.

ಇದು ಪೂರ್ವಭಾವೀ ಯೋಜನೆಯಲ್ಲ. ಆಕಸ್ಮಿಕವಾಗಿ ಕಾಕತಾಲೀಯವೆಂಬಂತೆ ನಡೆದುದು-ಲೋಕದ ಮಾನವರಿಗೆ ಕಾಕತಾಲೀಯ, ಆಕಸ್ಮಿಕವೆಂದು ಕಂಡರೂ ವಿಶ್ವ ವಿಭೂತಿ ಬಸವಣ್ಣನವರ ಸತ್ಸಂಕಲ್ಪದ ಫಲ. ಈ ವಿಶೇಷ ಘಟನೆ ನಡೆದುದು ಆಗಸ್ಟ್ ೧೫, ೧೯೭೭ ರಂದು, ಬೆಂಗಳೂರಿನ "ಬಸವ ಮಂಟಪದಲ್ಲಿ". ಕರ್ನಾಟಕ ರಾಜ್ಯದ ರಾಜಧಾನಿ ಕಲ್ಯಾಣಪುರಿ (ಬೆಂಗಳೂರು) ಯ ರಾಜಾಜಿನಗರ ಬಡಾವಣೆಯಲ್ಲಿರುವ ಬಸವ ಮಂಟಪದಲ್ಲಿ ವಿಶ್ವಕಲ್ಯಾಣ ಮಿಷನ್ ಆಶ್ರಯದಲ್ಲಿ ಆಗಸ್ಟ್ ೧೩, ೧೪ ಮತ್ತು ೧೫ ರಂದು ವಿಚಾರ ಗೋಷ್ಠಿಯು ಜರುಗಿತು. ಈ ಗೋಷ್ಠಿಯ ಅಧ್ಯಕ್ಷತೆಯನ್ನು ಪೂಜ್ಯಶ್ರೀ ಸದ್ಗುರು ಲಿಂಗಾನಂದ ಸ್ವಾಮಿಗಳವರು ವಹಿಸಿದ್ದರು. ಕಾರ್ಯಕ್ರಮದ ನೇತೃತ್ವವನ್ನು ಪೂಜ್ಯಶ್ರೀ ಜಗದ್ಗುರು ಮಾತೆ ಮಹಾದೇವಿಯವರು ವಹಿಸಿದ್ದರು.

ಸನ್ಮಾನ್ಯ ಶರಣರುಗಳಾದ ಡಾ। ಡಿ ಸಿ. ಪಾವಟೆ ಡಾ। ಜಿ ಎಸ್. ಶಿವರುದ್ರಪ್ಪ, ಡಾ। ಚಿದಾನಂದಮೂರ್ತಿ ಕೆ. ಆರ್. ಲಿಂಗಪ್ಪ, ಮಾ. ನಂ ನಂಜಪ್ಪ, ಶಾಸಕ ವಿಶ್ವನಾಥರೆಡ್ಡಿ ಮುದ್ನಾಳ, ಡಾ। ಬಾಡಾಲ ರಾಮಯ್ಯ, ಶ್ರೀ ಬಸವರಾಜ ತಂಬಾಕೆ, ಹೆಚ್. ಗಂಗಾಧರನ್, ಗೋ.ರು. ಚನ್ನಬಸಪ್ಪ, ಹಿ. ಚಿ. ಶಾಂತವೀರಯ್ಯ, ಟಿ. ಎಸ್. ಪಾಟೀಲ್, ಜಿ. ಎಂ. ಪಾಟೀಲ್, ಚಂದನಗೌಡರು, ಎಸ್.ಎಂ. ಅಂಗಡಿ, ಎಸ್.ವಿ. ಪಾಟೀಲ್, ಹಳೇಪೇಟೆ ಚಿಂತಾಮಣಿ, ಎರೇಸೀಮೆ ಚನ್ನಪ್ಪ, ಹೆಚ್. ದೇವೀರಪ್ಪ ಇನ್ನೂ ಮುಂತಾದವರು ಭಾಗವಹಿಸಿದ್ದರು.

ಇಂದಿನ ಬದಲಾದ ಪರಿಸರಕ್ಕೆ ತಕ್ಕಂತೆ ಧರ್ಮವನ್ನು ಮಾರ್ಪಡಿಸುವ ಆಧುನಿಕ ಮಾನವನನ್ನು ಆಕರ್ಷಿಸಲು, ಒಲಿಸಲು ಬೇಕಾದಂತೆ ಆಚಾರ-ವಿಚಾರಗ ಸರಳೀಕೃತಗೊಳಿಸುವ ಬಗೆಗೆ ಮುಕ್ತಮನದ ಚರ್ಚೆ ನಡೆಯಿತು. ಶ್ರೀ ಸಾಮಾನ್ಯರಿಂದ ಪಂಡಿತರವರೆಗೆ, ನಾಸ್ತಿಕನಿಂದ ಅನುಭಾವಿಯವರೆಗೆ ಎಲ್ಲರೂ ತಮ್ಮ ತಮ್ಮ ಅನಿಸಿಕೆಗಳನ್ನು ಸಭೆಯ ಮುಂದಿಡುವ ಸ್ವಾತಂತ್ರ್ಯವಿದ್ದುದೊಂದು ಇಲ್ಲಿಯ ವೈಶಿಷ್ಟ್ಯ.

### "ಬಸವ ಧರ್ಮ" ಘೋಷಣೆ

ಗೋಷ್ಠಿಯಲ್ಲಿ ಅನೇಕ ವಿಷಯಗಳ ಚಿಂತನ-ಮಂಥನ ನಡೆಯಿತು. ೧೨ ನೆಯ ಶತಮಾನದಲ್ಲಿ ಅನುಭವ

ಮಂಟಪದ ಕಾರ್ಯಾಲಯದಲ್ಲಿ ರೂಪುಗೊಂಡು ಧರ್ಮಕ್ಕೆ, ವಿಚಾರವಾಹಿನಿಗೆ ಸೂಕ್ತ ಹೆಸರಾವುದು ? ದೀರ್ಘಕಾಲದ ಮಂಥನ ನಡೆದ ಬಳಿಕ 'ಬಸವ ಧರ್ಮ'ವೆಂದು ನಿರ್ಣಯಿಸಲಾಯಿತು. ವಚನ ಶಾಸ್ತ್ರದಲ್ಲಿ ರೂಪಿತವಾದ ಒಂದು ಸಂಹಿತೆಯ ಆದ್ಯರು, ಮಹಾ ಶಿಲ್ಪಿಯು, ವಿಶ್ವಗುರು ಬಸವಣ್ಣನವರೇ ಆದ ಕಾರಣ ಯಾವುದೇ ಒಗೆಯ ಗೊಂದಲ ತಪ್ಪಿಸಲು ಅವರ ಹೆಸರಿನಿಂದ ಆ ಧರ್ಮವನ್ನು ಕರೆಯುವುದು ಸರ್ವಸೂಕ್ತ.

ಕರುಣಿ ಬಸವಾ, ಕಾಲಹರ ಬಸವಾ, ಕರ್ಮಹರ ಬಸವಾ,
ನಿರ್ಮಳ ಬಸವಾ, ಶಿವಜ್ಞಾನಿ ಬಸವಾ,
ನಿಮ್ಮ ಧರ್ಮವಯ್ಯಾ –ಈ ಭಕ್ತಿ ಪಥವು
ಕರುಣಿ ಕಪಿಲ ಸಿದ್ಧಮಲ್ಲಿನಾಥಯ್ಯ
ನಿಮಗೂ ಎನಗೂ ಬಸವಣ್ಣನ ಧರ್ಮವಯ್ಯಾ.

ಶಿವಯೋಗಿ ಸಿದ್ಧರಾಮೇಶ್ವರರ ಉಕ್ತಿಯಂತೆ ಇಂದು ನಮಗಿರುವುದು ಬಸವಣ್ಣನ ಧರ್ಮವೇ ಆದ ಕಾರಣ, ಇನ್ನೂ ಮುಂದೆ ಇದನ್ನು ಹೀಗೇ ಕರೆಯಬೇಕು. ಈ ಧರ್ಮದ ಅನುಯಾಯಿಯನ್ನು 'ಬಸವ ಧರ್ಮ' ಎಂದು, ಅವನು 'ಬಸವಾಯತ' ಆಗಬೇಕೆಂದು ನಿರ್ಣಯ ಕೈಗೊಳ್ಳಲಾಯಿತು.

ಬಸವಣ್ಣನೇ ಈ ಧರ್ಮದ ಆದಿ ಗುರುವೆಂದು, ಮಂತ್ರ ಪುರುಷನೆಂದು ಶರಣಾಗತ ರಕ್ಷಕನೆಂದು, ಅನುಯಾಯಿಯು ನಂಬಬೇಕು. ಬಸವಣ್ಣನೇ ಪ್ರಥಮ ಗುರುವಾಗಿ, ಆ ಸಂಪ್ರದಾಯದ ಶರಣರು ರಚಿಸಿದ ವಚನ-ಶಾಸ್ತ್ರವೊಂದನ್ನೇ ತಮ್ಮ ಆಚಾರ–ವಿಚಾರ ಸಂಹಿತೆಯೆಂದು ಭಾವಿಸಬೇಕು. ಸಕಲ ಜೀವಾವಳಿಗೆ ಲೇಸು ಬಯಸುವ ಬಸವ ಪಥವೇ ತನ್ನದೆಂದು ತಿಳಿದು, ಜಾತಿ-ವರ್ಣ-ವರ್ಗ. ರಹಿತ ಕಲ್ಯಾಣ ರಾಜ್ಯವನ್ನು ಸ್ಥಾಪಿಸುವ ದಿಶೆಯಲ್ಲಿ ಮುನ್ನಡೆಯಬೇಕು. ಅಂಥಹವನೇ ಈ ಧರ್ಮದ ಅನುಯಾಯಿ ಎಂದು ನಿರ್ಣಯಿಸಿದುದಲ್ಲದೆ, ಪೂಜ್ಯ ಶ್ರೀ ಜಗದ್ಗುರು ಮಾತೆ ಮಹದೇವಿಯವರೇ ಮೊದಲಿಗರಾಗಿ ಪ್ರತಿಜ್ಞೆಯನ್ನು ಸ್ವೀಕರಿಸಿದರು. ಗಣ ಸಾಕ್ಷಿಯಾಗಿ ತಾವು ಬರೆದ ಪ್ರತಿಜ್ಞಾವಿಧಿಯನ್ನು ಗಂಭೀರವಾಗಿ ಓದಿ, ಘೋಷಿಸಿದ ಬಳಿಕ ಅವರು ಹೇಳಿಸಿದಂತೆ ಉಳಿದವರು ಹೇಳಿ 'ಬಸವ ಧರ್ಮ' ಸಂಘಟನೆಯಲ್ಲಿ ತಮ್ಮ ವಿಶ್ವಾಸ ವ್ಯಕ್ತಪಡಿಸಿದರು ಪೂಜ್ಯ ಶ್ರೀ ಸದ್ಗುರು ಲಿಂಗಾನಂದ ಶ್ರೀಗಳು ಶ್ರೀ ಬಸವರಾಜ ತಂಬಾಕೆ, ಶರಣೆ–ಗಂಗಮ್ಮ, ಕೆ ಆರ್. ಲಿಂಗಪ್ಪ, ಗೋ. ರು. ಚನ್ನಬಸಪ್ಪ, ಹೆಚ್ ಗಂಗಾಧರನ್, ಹೀ. ಚಿ. ಶಾಂತವೀರಯ್ಯ ಇನ್ನೂ ಮುಂತಾಗಿ ಅನೇಕರು 'ಬಸವ ಧರ್ಮ' ಪ್ರತಿಜ್ಞೆಯಲ್ಲಿ ಭಾಗಿಗಳಾದರು. ಷಟ್‌ಸ್ಥಲ ಬ್ರಹ್ಮಿಗಳ ಸಂಕೇತವೆಂಬಂತೆ ಆರಾರು ಜನರಿಗೆ ಒಟ್ಟಾಗಿ ಪ್ರತಿಜ್ಞೆಯಾದ ಬಳಿಕ, ಸಾಮೂಹಿಕ ಪ್ರತಿಜ್ಞೆ ನಡೆಯಿತು. ಅಂದು ಸುಮಾರು ಇನ್ನೂರರಷ್ಟು ಶರಣ-ಶರಣೆಯರು ಬಸವ ತತ್ತ್ವಕ್ಕೆ ದುಡಿಯುವ ಸಂಕಲ್ಪಗೈದರು

ರಾಷ್ಟ್ರದ ಸ್ವಾತಂತ್ರ್ಯವನ್ನು ಸಾರಿದ ಆಗಸ್ಟ್ ೧೫ ರಂದು, ಮನುಕುಲ ಸ್ವಾತಂತ್ರ್ಯ ಸಾರುವ ಬಸವ ತತ್ವದ ಅನುಷ್ಠಾನಕ್ಕೆ ಪ್ರತಿಜ್ಞೆ ಗೈದುದು ಅಪೂರ್ವ ಘಟನೆ. ಪ್ರತಿಜ್ಞಾ ಸ್ವೀಕಾರ ಕಾರ್ಯಕ್ರಮ ಉದ್ಬೋಧಕ, ಮಂಗಲಮಯ ಕ್ರಾಂತಿಕಾರಕ. ರೋಮಾಂಚಕಾರಿಯಾಗಿದ್ದು, ನೆರೆದವರನ್ನು ಹರ್ಷಪುಳಕಿತರನ್ನಾಗಿ ಮಾಡಿತು.

'ಬಸವ ತತ್ವ ಪರಿಷತ್ತು'

ಶ್ರೇಷ್ಠಮಟ್ಟದ ಸಮತಾವಾದಿ, ಮನುಕುಲೋದ್ಧಾರಿ, ಜಗದ್ಗುರು, ವಿಶ್ವವಿಭೂತಿ ಬಸವಣ್ಣನವರ ತತ್ವಗಳ ಅನುಷ್ಠಾನಕ್ಕಾಗಿ, ಬಸವ ಧರ್ಮ ಪ್ರಸಾರಕ್ಕಾಗಿ ಬಸವ ತತ್ವ ಪರಿಷತ್ತು ಎಂಬ ಸಂಸ್ಥೆಯನ್ನು ರೂಪಿಸಲು ಸಂಕಲ್ಪಿಸಲಾಗಿದೆ ಸಾಹಿತ್ಯ, ಶಿಕ್ಷಣ, ತತ್ವನಿರ್ಣಯ, ಧರ್ಮಪ್ರಸಾರ, ಸಮಾಜಸೇವೆ ಎಂಬ ಈ ಐದು ಕ್ಷೇತ್ರಗಳಲ್ಲಿ ಅದು ದುಡಿಯುವಂತೆ ಐದು ವಿಭಾಗಗಳನ್ನು ಹೊಂದಿ ಈ ಸಂಸ್ಥೆ ಕಾರ್ಯಮಾಡಲಾಗದೆ. ತಾತ್ಪೂರ್ತಿಕವಾಗಿ ಬಸವ ಮಂಟಪದಲ್ಲಿ ಬಸವ ತತ್ವ ಪರಿಷತ್ತಿನ ಕೇಂದ್ರ ಕಛೇರಿಯನ್ನು ನಡೆಸಿದರೂ, ತನ್ನದೇ ಆದ ಕಟ್ಟಡ ನಿರ್ಮಿಸುವ ಯೋಜನೆಯಿದೆ. ಈ ಸಂಸ್ಥೆಯವತಿಯಿಂದ ಸಮ್ಮೇಳನವನ್ನು ಮುಂದಿನ ವರ್ಷ ನಡೆಯಿಸುವ ನಿರ್ಧಾರ ಕೈಗೊಳ್ಳಲಾಯಿತು. ಬಸವ ತತ್ವ ಪರಿಷತ್ತಿನ ವಲಯ ಕೇಂದ್ರ, ಜಿಲ್ಲಾ ಕೇಂದ್ರಗಳನ್ನು ಸಂಘಟಿಸುವ ಬಗ್ಗೆ ಚರ್ಚಿಸಲಾಯಿತು. ಅದರವತಿಯಿಂದ ನಾಡಿನಾದ್ಯಂತ ಬಸವ ಮಂಟಪಗಳನ್ನು ತೆರೆಯುವ ಸಂಕಲ್ಪಗೈಯಲಾಯಿತು.

ಹೀಗೆ ಪರಿಣಾಮಕಾರಿ ಯೋಜನೆಗಳೊಡನೆ ವಿಚಾರ ಗೋಷ್ಠಿಯು ಯಶಸ್ವಿಯಾಗಿ ಮುಕ್ತಾಯಗೊಂಡಿತು.

—

# ಶ್ರೀ ಗಣೇಶವ್ರತ



ಪ್ರಾತಃಸ್ಮರಾಮಿ ಗಣನಾಥಮನಾಥ ಬಂಧುಂ
ಸಿಂದೂರಪೂರ ಪರಿಶೋಭಿತ ಗಂಡಯುಗ್ಮಂ ।
ಉದ್ಧಂಡವಿಘ್ನ ಪರಿಖಂಡನ ಚಂಡ ದಂಡಂ
ಆಖಂಡಲಾದಿ ಸುರನಾಯಕ ವೃಂಧ ವಂದ್ಯಂ॥



ವಿಘ್ನೇಶ ವೀರ್ಯಾಣಿ ವಿಚಿತ್ರಕಾಣಿ
ವಂದೀಜನೈರ್ಮಾಗಧಕೈಃಸ್ಮೃತಾನಿ ।
ಶೃತ್ವಾ ಸಮುತ್ತಿಷ್ಠ ಗಜಾನನತ್ವಂ ಬ್ರಾಹ್ಮೇ
ಜಗನ್ಮಂಗಲಕಂಕುರುಷ್ವ ॥

ಧರ್ಮವನ್ನು ತಿಳಿಯ ಬೇಕಾದರೆ ಬುದ್ಧಿಯೇ ಬಹು ಮುಖ್ಯವಾದದ್ದು. ಬುದ್ಧಿಗೆ ಯಜಮಾನನೇ ಗಣಪತಿಯು. ನಾವು ಮಾಡುವ ಎಲ್ಲಾ ಕಾರ್ಯಗಳು ಸಿದ್ಧಿಯಾಗ ಬೇಕಾದರೆ ಬುದ್ಧಿದಾಯಕ ಗಣಪತಿಯನ್ನು ಭಜಿಸಿ ಪೂಜಿಸಲೇ ಬೇಕು. ಪ್ರತಿಯೊಬ್ಬರಿಗೂ ಅವರು ಮಾಡುವ ಕಾರ್ಯವು ಒಳ್ಳೆಯದಾಗ ಬೇಕೆಂಬುದು ಎಲ್ಲರ ಗುರಿಯಾಗಿರುತ್ತದೆ. ಉತ್ತಮ ಗುರಿಯಿಟ್ಟು ಮಾಡುವ ಯಾವಕಾರ್ಯಗಳೇ ಆಗಲೀ ಸಿದ್ಧಿಸಿಯೇ ಸಿದ್ಧಿಸುತ್ತವೆ.

"ಶ್ರೇಯಾಂಸಿ ಬಹು ವಿಘ್ನಾನಿ" ಎಂಬುದಾಗಿ ಪ್ರತಿಯೊಂದು ಒಳ್ಳೆಯ ಕೆಲಸಕ್ಕೆ ನೂರಾರು ವಿಘ್ನವೆಂಬ ಮಾತು ಜನಜನಿತ. ವಿಘ್ನಕಾರಕ ತತ್ವದ ಪ್ರತೀಕ ವಿಘ್ನೇಶ್ವರ ಅಥವಾ ವಿನಾಯಕ ಎಂಬುದು, ವಿನಾಯಕ ತತ್ವದ ಮನೋವೈಜ್ಞಾನಿಕ ವಿಶ್ಲೇಷಣೆ. ಈ ವಿಘ್ನ ಕಾರಕನಾದ ವಿನಾಯಕನನ್ನು ಪೂಜೆ ಪುರಸ್ಕಾರಗಳಿಂದ ಒಲಿಸಿ ಕೊಳ್ಳ ಬೇಕು. ಹೀಗೆ ಬಂದಾಗ ವಿಘ್ನಕಾರಕನಾಗಿದ್ದವನು, ವಿಘ್ನ ನಿವಾರಕನಾಗುತ್ತಾನೆ. ವಿಘ್ನಕಾರಕ ಮತ್ತು ವಿಘ್ನಹಾರಕ ತತ್ವಗಳನ್ನು ಪ್ರತಿ ಪಾಲಿಸುವ, ಅಥವ ವಿವರಿಸುವ ಅನೇಕ ದಂತ ಕಥೆಗಳು ವಿನಾಯಕನ ಸುತ್ತ ಬೆಳೆದಿವೆ. ಪುರಾಣಗಳಲ್ಲಿ ತಿಳಿಸಿರುವಂತೆ ವೇದ ಸೂತ್ರಗಳನ್ನು ರಚಿಸಿದ ಭಗವಾನ್ ವ್ಯಾಸಮಹರ್ಷಿಗಳು ತಮ್ಮ ಯೋಗ ಬಲದಿಂದ ಸಮಾಧಿಸ್ಥರಾಗಿ ಕುಳಿತಿರುವಾಗ ತಮ್ಮ ಆನಂದವೇ ಅವರ ಬಾಯಿಂದ ಹೊರಬಿದ್ದೇ "ಪಂಚಮ ಶ್ರುತಿ" ಎಂಬ ಪ್ರಖ್ಯಾತವಾಗಿರುವ ಭಾರತವು ಅವರು ಹೇಳುತ್ತಿರುವಾಗಲೇ ಕಾವ್ಯರೂಪದಲ್ಲಿ ಬಂದುದನ್ನು ಬರೆದುಕೊಳ್ಳಲು ಗಣಪತಿಯೊಬ್ಬನಿಗೇ ಸಾಧ್ಯವಾಯಿತು. ಅಂದಿನಿಂದ ಗಣಪತಿಗೆ ವಿದ್ಯಾಭಿಮಾನದೇವನೆಂಬ ಹೆಸರುಬಂದಿರುತ್ತದೆ

ಶ್ರೀ ಪಾರ್ವತೀ ಪರಮೇಶ್ವರ ಅಂಶದಿಂದ ಹುಟ್ಟಿದ ವರಕುಮಾರನಾದ ಗಣಪತಿಯನ್ನು ಈಶ್ವರನು ಪ್ರಮಥ ಗಣಗಳಿಗೆಲ್ಲಾ ಒಡೆಯನನ್ನಾಗಿ ಮಾಡಿದನು. ಹೀಗಿರುವಾಗ ನಂದಿ, ಭೃಂಗಿ, ಗುಹ, ವೀರಭದ್ರರೇ ಮೊದಲಾಗಿ ಪ್ರಮಥಗಣಗಳಿಗೆಲ್ಲಾ ಮತ್ತು ಅಸೂಯೆಯು ಅಸಮಾಧಾನ ಹುಟ್ಟಿತು. ಇದನ್ನರಿತ ಪರಮೇಶ್ವರನು ಒಂದು ದಿವಸ ಎಲ್ಲರನ್ನೂ ಸಭೆ ಸೇರಿಸಿ "ಎಲೈ ಗಣಂಗಳೇ! ನೀವುಗಳೆಲ್ಲಾ ಸಮರ್ಥರಾಗಿರುತ್ತೀರಿ ಆದರೆ ನಿಮ್ಮಲ್ಲಿ ಯಾರು ಮೊದಲು ಭೂ ಪ್ರದಕ್ಷಿಣೆಯನ್ನು ಮಾಡಿ ಕೊಂಡು ಬರುತ್ತೀರೋ ಅವರನ್ನು ನಿಮ್ಮ ಗುಂಪಿಗೆಲ್ಲಾ ಪಾರುಪತ್ತೇಗಾರನ್ನಾಗಿ ಮಾಡುತ್ತೇನೆ" ಎಂಬುದಾಗಿ ಹೇಳಿದನು. ಕೂಡಲೇ ಎಲ್ಲರೂ ಭೂ ಪ್ರದಕ್ಷಿಣೆಗಾಗಿ ಹೊರಟು ಸಿದ್ಧರಾದರು. ಅಷ್ಟರಲ್ಲಿ ಗಣಪತಿಯು ಎದ್ದು ಈಶ್ವರನನ್ನು ಪ್ರದಕ್ಷಣೆ ಮಾಡಿ ಅಲ್ಲಿಯೇ ಕುಳಿತು ಕೊಂಡನು. ಈ ತೀಕ್ಷ್ಣಮತಿ ಯಾರಿಗೂ ಅರಿವಾಗಲಿಲ್ಲ. ನಂದಿ, ಭೃಂಗಿ, ಗುಹ, ವೀರಭದ್ರ ಮುಂತಾಗಿ ಎಲ್ಲರೂ ನಾನು ಮೊದಲು, ತಾವು ಮೊದಲೆಂದು ಭೂಪ್ರದಕ್ಷಿಣೆಗಾಗಿ ಹೊರಟರು. ಕೆಲವರು ಭೂಮಿಯನ್ನು ಸುತ್ತಿ ಕೊಂಡು ಜಾಗ್ರತೆಯಾಗಿ ಬಂದರು ಕೆಲವರು ನಿದಾನವಾಗಿ ಬಂದರು. ಎಲ್ಲರೂ ಬಂದಮೇಲೆ ಅವರನ್ನು ಕುರಿತು "ನಿಮ್ಮಲ್ಲಿ ಭೂಪ್ರದಕ್ಷಿಣೆಯನ್ನು ಮುಗಿಸಿ ಕೊಂಡು ಬಂದವರಲ್ಲಿ ಯಾರು ಮೊದಲಿಗರು?" ಎಂದು ಕೇಳಿದನು. ಕೂಡಲೇ ಗಣಪತಿಯು ಎದ್ದು ನಿಂತು "ನಾನು ಮೊದಲಿಗ" ನೆಂದು ಹೇಳಿದನು. ಈ

ಮಾತನ್ನು ಕೇಳಿದ ಎಲ್ಲರಿಗೂ ತುಂಬಾ ಅಸಮಾಧಾನ ಹೊಂದಿ ಕೋಪಗೊಂಡರು. ಆಗ ಗಣಪತಿ "ಅಖಿಲಾಂಡ ಬ್ರಹ್ಮಾಂಡಗಳನ್ನೆಲ್ಲಾ ತನ್ನ ಉದರದಲ್ಲಿಟ್ಟುಕೊಂಡು ಎಲ್ಲವನ್ನೂ ನೋಡುತ್ತಿರುವ ಈಶ್ವರನನ್ನು ಪ್ರದಕ್ಷಿಣೆ ಮಾಡಿದರೆ ಭೂ ಪ್ರದಕ್ಷಿಣೆ ಮಾಡಿದಂತೆಯೇ ಆಗುತ್ತದೆ. ಆದ್ದರಿಂದ ನಾನು ಎಲ್ಲರಿಗೂ ಮೊದಲೇ ಈಶ್ವರನಿಗೆ ಪ್ರದಕ್ಷಿಣೆ ಮಾಡಿರುತ್ತೇನೆ. ಆದ್ದರಿಂದ ಭೂ ಪ್ರದಕ್ಷಿಣೆ ಮಾಡಿದವರಲ್ಲಿ ನಾನೇ ಮೊದಲು" ಎಂದು ಹೇಳಿದನು. ಇದನ್ನು ಕೇಳಿದ ಎಲ್ಲರೂ ತಲೆ ಬಾಗಿಸಿದರು. ಪ್ರಥಮ ಗಣಗಳ ಮೇಲಿನ ಅಧಿಕಾರ ಸಿಕ್ಕಿತು. ಮೊದಲ ಪೂಜೆಯನ್ನು ಈಶ್ವರನೇ ಮಾಡಿದನು. ಗಣಗಳ ಸಮೂಹಕ್ಕೆ ಒಡೆಯನನ್ನಾಗಿ ಮಾಡಿ ಎಲ್ಲರೂ ಗಣಪತಿಗೆ ಪೂಜೆಸಲ್ಲಿಸಬೇಕೆಂದು ಕೈಲಾಸಪತಿಯೇ ಗೊತ್ತು ಮಾಡಿದನು. ಮೊದಲ ಪೂಜೆಯನ್ನು ಮಾಡಿದ ಶುಭ ದಿವಸವೇ ಭಾದ್ರಪದ ಶುದ್ಧ ಚತುರ್ಥಿಯ ದಿನವಾಗಿರುತ್ತೆ. ಈ ದಿನವೇ ಗಣೇಶನ ಹಬ್ಬವೆಂದೂ, ವರಸಿದ್ಧಿ ವಿನಾಯಕ ವ್ರತವೆಂದೂ ಪ್ರಖ್ಯಾತಿಯಾಗಿರುತ್ತದೆ. ಮತ್ತು ಪ್ರತಿ ತಿಂಗಳು ಕೃಷ್ಣ ಪಕ್ಷದ ಚೌತಿಯ ದಿನ ಆಚರಿಸುವ ಸಂಕಷ್ಟಹರ ಗಣಪತಿವ್ರತದ ಕಲ್ಪನೆಯ ಮೂಲವೂ ಇದೆ.

## "ಶ್ರೀ ಶರಣ" ಅದ್ವಿತೀಯ ಅನುಭವ ಮಂಟಪ

(9ನೇ ಪುಟದಿಂದ)

ಯಾರಿಂದಲೂ ಮುಚ್ಚಿಡ ಬಾರದೆಂಬ ಬಿಚ್ಚು ಬಗೆ, ತಪ್ಪನ್ನೊಪ್ಪಿ ಕೊಳ್ಳುವಲ್ಲಿ ನಿಸ್ಸಂಕೋಚತೆ, ಇದು ನನಗೆ ತಿಳಿಯದೆನ್ನುವಲ್ಲಿ ಪ್ರಾಂಜಲತೆ, ಪಾಂಡಿತ್ಯಪ್ರದರ್ಶನ, ಮೇಲರಿಮೆಯ ಮೆರೆವಣಿಗೆ, ಮನ್ನಣೆಯದಾಹ–ಇವುಗಳ ಅನುಪಸ್ಥಿತಿ ಇತ್ಯಾದಿಗಳು ಮಂಟಪದಲ್ಲಿ ನಡೆವ ವಾದ, ಚರ್ಚೆಗಳಿಗೆ ಅನನ್ಯವಾದ ಸ್ನೇಹಪ್ರಜ್ಞತೆ,ಸ್ವಂತಿಕೆ, ಸಹಜತೆಗಳನ್ನು ನೀಡುತ್ತಿದ್ದವು.

10. ಇದು ರಾಜಾಶ್ರಯಕ್ಕಾಗಿ ಹಂಬಲಿಸಿ, ಧರ್ಮಸತ್ತೆಯನ್ನು ರಾಜಸತ್ತೆಯ ಸ್ಥಿರೀಕರಣಕ್ಕಾಗಿ ಉಪಯೋಗಿಸಿದವರ ಮಂಟಪವಲ್ಲ; ನೆಲನಾಳ್ವನ ಹೆಣವೆಂದೊಡೆ ಒಂದಡಕೆಗೆ ಕೊಂಬುವರಿಲ್ಲ, ಎಂದು ಸಾರಿ ಪ್ರಜಾಸತ್ತೆಯನ್ನೇ ನಂಬಿದವರ ಮಂಟಪ ಇನ್ನೂ ಒಂದೆರಡು ಮಗ್ಗುಲುಗಳನ್ನು ಸೇರಿಸಬಹುದಾದರೂ ಇಲ್ಲಿ ಇಷ್ಟು ಸಾಕು.

ಇವುಗಳಿಂದಲೇ ಅನುಭವ ಮಂಟಪದ ಅದ್ವಿತೀಯತೆ ಸಿದ್ಧವಾಗುವುದೆಂದು ನಂಬಿದ್ದೇನೆ. ಶ್ರೀಸಾಮಾನ್ಯರಿಗೂ ವಿಚಾರ ವಿನಿಮಯ, ಚಿಂತನ-ಮಂಥನಗಳ ಅವಕಾಶಗಳನ್ನು ಕಲ್ಪಿಸಿಕೊಟ್ಟ, ಅದುವರೆಗಿನ ಬೌದ್ಧಿಕತೆಯ ಏಕ ಸ್ವಾಮ್ಯವನ್ನು ಕೊನೆಗಾಣಿಸಿ, ಸಮಾಜದ ಸಮಸ್ತ ಶ್ರೇಣಿಗಳವರಲ್ಲಿ, ಸ್ತರಗಳವರಲ್ಲಿ ಮುಕ್ತ ಮನಸ್ಸಿನ ವಿಚಾರಗಳ ಆದಾನ ಪ್ರದಾನಗಳನ್ನು ಆರಂಭಿಸಿ, ಎಲ್ಲರಿಗೂ ಬೆಳವಣಿಗೆ, ಆತ್ಮಸಾಧನೆ, ಮಾನಸಿಕ ಆರೋಗ್ಯ ಸಂಪಾದನೆ, ಅನನ್ಯತೆ ಮತ್ತು ಸ್ವಾಯತ್ತತೆಗಳ ಅರ್ಜನೆ, ಅತ್ಯುನ್ನತಿಯ ಅಳವಡಿಕೆಯ ಅವಕಾಶಗಳನ್ನು ನೀಡಿದುದು ಈ ಮಂಟಪದ ಮಹತ್ ಸಾಧನೆ, ವಿರಾಟ್ ವೈಶಿಷ್ಟ್ಯ. ವಿಚಾರಗಳ ಏಕಮಾರ್ಗೀಯ ಸಂಚಾರವನ್ನು ತಪ್ಪಿಸಿ ದ್ವಿಮಾರ್ಗೀಯ ಸಂಚಾರ ವ್ಯವಸ್ಥೆಯನ್ನು ರೂಪಿಸಿದುದು. ಆಲೋಚನೆಗಳ ಅಡ್ಡ ಪರಾಗಾಧಾನವನ್ನು ಏರ್ಪಡಿಸಿದುದು, ಕತ್ತಲೆಯ ಕರಿ ಮೊಸರನ್ನೇ ಕಡೆದು ಬೆಳಕಿನ ಬೆಣ್ಣೆಯನ್ನು ಬರಿಸಿದುದು ನಿಜಕ್ಕೂ ಅಪೂರ್ವ ಕ್ರಾಂತಿ, ಈ ದೃಷ್ಟಿಯಿಂದ ಅನುಭವ ಮಂಟಪ ವಿಚಾರ ಸ್ವಾತಂತ್ರ್ಯದ ವಿಜಯಧ್ವಜ, ಸಾಂಸ್ಕೃತಿಕ ಕ್ರಾಂತಿಯೊಂದರ ಸಂಕೇತ, ಶ್ರೀಸಾಮಾನ್ಯರ ಶುಭೋದಯದ ಶ್ರೀಕಾರ, ಸರ್ವಸಮಾನತೆಯ ಝೇಂಕಾರ. —

## 'ದೇವರು ಮತ್ತು ವಿಜ್ಞಾನ'

(20ನೇ ಪುಟದಿಂದ)

ಸ್ಥಾಪನೆಗೆ ಅವಶ್ಯ. ಇದನ್ನು ಮನಗಂಡು ಪ್ರಕೃತಿಯ ನಿಯಮಕ್ಕೊಳಗಾಗಿ ಬಾಳುವುದರಲ್ಲಿ ಬದುಕಿನ ಆದರ್ಶವಿದೆ. ಸುಯೋಗ್ಯ ಶಿಕ್ಷಣದಿಂದ ಇದನ್ನು ಕೈಗೂಡಿಸಿಕೊಳ್ಳಬಹುದು ಒಟ್ಟಿನಲ್ಲಿ ವಿಜ್ಞಾನದಿಂದ ಸುಜ್ಞಾನವು ಸಮೃದ್ಧಿಯಾಗಿ, ವಿವೇಕಿಗಳ ಸಂಖ್ಯೆ ಹೆಚ್ಚಿ, ಮಾನವನ ಜೀವನವು ಪಾವನವಾಗಲಿ. ಪ್ರಯತ್ನಗಳೆಲ್ಲವೂ ಲೋಕೈಕ ಪ್ರಭುವಿನ ಪ್ರಸಾದದಿಂದ ಫಲಿಸಿ ಎಲ್ಲೆಡೆಯೂ ಸುಖ ಸೌಭಾಗ್ಯಗಳು ತುಂಬಿ ತುಳುಕಲಿ ಎಲ್ಲರ ಬದುಕು ಬಂಗಾರವಾಗಲಿ ! —

# ನಿಮಗೆ ಯಾವುದು ಸೂಕ್ತ ? ಆಯ್ದುಕೊಳ್ಳಿ ! ಆರಂಭಿಸಿರಿ ! !

ಸುಪ್ರಸಿದ್ಧ ಸುಕ್ಷೇತ್ರ ಸಿದ್ಧಗಂಗಾ. ಇಲ್ಲಿ ಎಡೆಬಿಡದೆ ನಡೆಯುತ್ತಿರುವ ತ್ರಿವಿಧ ದಾಸೋಹಗಳು ಎಲ್ಲೆಲ್ಲೂ ಜನಜನಿತ. ಸುಮಾರು ದಶಕಗಳ ಸಾರ್ವಜನಿಕ ಸೇವೆ ಎಲ್ಲರನ್ನೂ ಆಕರ್ಷಿಸಿದೆ; ಅವರ ಮೆಚ್ಚುಗೆಯನ್ನು ಪಡೆದಿದೆ.

ಮೆಚ್ಚಿದ ಮಹನೀಯರು ನಿಂತು ಬೆಂಬಲಿಸುತ್ತಿದ್ದಾರೆ. ಕೊಡುಗೈ ದೊರೆಗಳಾಗಿ ನೀಡುತ್ತಿದ್ದಾರೆ. ಅನೇಕರು ಅನೇಕ ವಿಧಗಳಲ್ಲಿ ಈ ಬೃಹತ್ಪ್ರಮಾಣದ ಮಹತ್ಕಾರ್ಯಕ್ಕೆ ನೆರವಾಗುತ್ತಿದ್ದಾರೆ. "**ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ**" ಎಂಬುದಾಗಿ **ಶ್ರೀ ಗಳವರೇ** ಸಾರಿ ಸಾರಿ ಹೇಳಿದ್ದಾರೆ. ದಾನಿಗಳ ದಾನ ಪವಿತ್ರ ಪಾತ್ರತ್ವವನ್ನು ಇಲ್ಲಿ ಹೊಂದುತ್ತದೆ. ಈ ಮಹಾಶಯರುಗಳಿಗೆ '**ಸಿದ್ಧಗಂಗಾ**' ತುಂಬು ಧನ್ಯವಾದಗಳನ್ನು ಅರ್ಪಿಸುತ್ತದೆ.

**ಧಾನ್ಯ ಸಂಗ್ರಹಣೆ:**

ಪ್ರತಿವರ್ಷ ಸುಗ್ಗಿಯಲ್ಲಿ ಇಂತಿಷ್ಟು ಧಾನ್ಯ ಮುಡುಪಾಗಿಡಿ.
ನೀವು ಬಂದಾಗ ತಂದು ಅರ್ಪಿಸಿರಿ, ಅಥವಾ ಕ್ಷೇತ್ರದ ಪ್ರತಿನಿಧಿಗಳು ಬಂದಾಗ ಒಪ್ಪಿಸಿರಿ
ನೀವು ನೀಡಿದ ತೆನೆಗಳು ಕೂಡಿ ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಧನಸಹಾಯ:**

ಪ್ರತಿ ತಿಂಗಳೂ ಯಥಾಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ.
ನಿಮ್ಮ ಖಾತೆ ಇರುವ ಬ್ಯಾಂಕಿನಲ್ಲಿ ಶ್ರೀ ಕ್ಷೇತ್ರದ ಖಾತೆ ಇರುತ್ತೆ.
ಪ್ರತಿ ತಿಂಗಳೂ ನಿಮ್ಮ ಖಾತೆಯಿಂದ ಶ್ರೀಗಳವರ ಖಾತೆಗೆ ವರ್ಗಾಯಿಸಲು ಬ್ಯಾಂಕ್ ಮೇನೇಜರ್ ರವರಿಗೆ ಒಂದು ಪತ್ರ ಬರೆಯಿರಿ.
ನಿಮಗೆ ಶ್ರಮವಿಲ್ಲದೆ ನಿಮ್ಮ ಕಾಣಿಕೆ ಸಂದಾಯವಾಗುತ್ತದೆ.
ವರ್ಷಕ್ಕೊಮ್ಮೆ ನಿಮ್ಮಿಂದ ಸಂದಾಯವಾದ ಒಟ್ಟು ಕಾಣಿಕೆಯ ಬಗ್ಗೆ ಪತ್ರ ಬರುತ್ತೆ.

**ಕೂಡಿಟ್ಟು ಕಳುಹಿಸಿರಿ:**

ಒಂದೇ ಬಾರಿಗೆ ಇಂತಿಷ್ಟೆಂದು ದಾನ ನೀಡುವುದು ಹಲವರಿಗೆ ಅಸಾಧ್ಯ.
ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಒಂದು ಹುಂಡಿಯನ್ನು ನಿಮ್ಮ ಮನೆಯಲ್ಲಿಡಿರಿ.
ನಿತ್ಯ ಎಷ್ಟು ಸಾಧ್ಯವೋ ಅಷ್ಟನ್ನು ಹಾಕಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳಿಸಿರಿ.

ಯಾವುದೇ ಹಣ ಕಳಿಸುವವರು, ಎಂ. ಒ, ಅಥವಾ ಬ್ಯಾಂಕ್ ಡ್ರಾಫ್ಟ್ ಮೂಲಕ **ಶ್ರೀ ಶ್ರೀ ಶಿವಕುಮಾರಸ್ವಾಮಿಗಳು,** ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲಾ–572131 ಇವರಿಗೆ ನೇರವಾಗಿ ಕಳುಹಿಸಬೇಕು.

ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ "**ಶ್ರೀ ಸಿದ್ಧಗಂಗಾ**". ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ ನಿತ್ಯದಾಸೋಹಕ್ಕೆ ವಿನಿಯೋಗವಾಗುತ್ತದೆ. ನೀಡಿರಿ ನಿತ್ಯಸಂತೋಷವನ್ನು ಹೊಂದಿರಿ.

**ಭಕ್ತಮಂಡಲಿ**
ಶ್ರೀ ಸಿದ್ಧಗಂಗಾ ಕ್ಷೇತ್ರ

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ.